# ಕಂಬನಿ

ಹನ್ನೆರಡು ಸಣ್ಣಕತೆಗಳ ಸಂಕಲನ

ಶ್ರೀ. ಬೇಂದ್ರೆಯವರ ಮುನ್ನುಡಿ,
ಶ್ರೀ. ದತ್ತಾತ್ರೇಯ ಕುಲಕರ್ಣಿಯವರ
'ನಾನು ಕಂಡ ಗೌರಮ್ಮ'
ಇವುಗಳೊಡನೆ

ದಿವಂಗತ
ಮಿಸೆಸ್ ಬಿ. ಟಿ. ಜಿ. ಕೃಷ್ಣ

ಮನೋಹರ ಗ್ರಂಥ ಭಾಂಡಾರ, ಧಾರವಾಡ

ಬಿಂಡು ಕಾಗದದ
ಕ್ಯಾಲಿಕೋ ಪ್ರತಿ . ೧-೮-೦

ಸುಂದರ ಪ್ರತಿ:
೧-೦-೦

## ಪರಿವಿಡಿ

# ಮುನ್ನುಡಿ

ಶ್ರೀಮತಿ ಗೌರಮ್ಮನವರ ಕಥಾಸಂಗ್ರಹಕ್ಕೆ ಮುನ್ನುಡಿಯನ್ನು ಬರೆ
ಯಲು ನಾನು ಒಪ್ಪಿಕೊಂಡಾಗ ಅವರು ಇಷ್ಟು ಆಕಸ್ಮಾತ್ತಾಗಿ ದಾರುಣ
ವಾಗಿ ನಮ್ಮನ್ನಗಲಿ ಹೋಗುವರೆಂದು ನಾನು ಭಾವಿಸಿರಲಿಲ್ಲ. ಅವರ
ಕಥಾಸಂಗ್ರಹಕ್ಕೆ 'ಕಂಬನಿ' ಯೆಂಬ ಹೆಸರನ್ನು ಸೂಚಿಸಿದಾಗ ಅವರನ್ನು
ಕುರಿತೇ ಕಂಬನಿಗಳುರುಳುವವೆಂದು ನಾನು ಎಣಿಸಿರಲಿಲ್ಲ. ಯಾವ ಕೆಲಸ
ಸಂತೋಷ ಅಭಿಮಾನಗಳದೆಂದು ನಾನು ಬಗೆದಿದ್ದೆನೊ—ಅದರೊಳಗಿನ
ಅಭಿಮಾನ ಉಳಿದಿದೆ; ಆದರೆ ಸಂತೋಷದ ಸ್ಥಳವನ್ನು ಸಂತಾಪವು ವ್ಯಾಪಿ
ಸಿದೆ. ಆ ಸಂತೋಷದಂತೆಯೇ ಈ ಸಂತಾಪದಲ್ಲಿಯೂ ಒಂದು ವಿಧದ
ಸವಿಯಿರುವದಾದರೂ ಅದೆಲ್ಲವೂ ಕಣ್ಣೀರು ಸವರಿದ ನಾಲಗೆಯಿಂದ
ಪೆಪ್ಪರಮಿಂಟು ಚಪ್ಪರಿಸಿದಂತೆಯೆ ಸರಿ. ಗೌರಮ್ಮನವರ ಜೀವನದಲ್ಲಿ
ಒಂದು ಬಗೆಯ ಸಮಾಧಾನವಿದ್ದರೂ ಅವರ ಜೀವನಸಹಾನುಭೂತಿಯಲ್ಲಿ
ಪರಗತದುಃಖಾಸ್ವಾದನೆಯಿಂದ ಬಂದ ಮಧುರ ವಿಷಾದಕ್ಕೆ ಅಪಾರವಾದ
ಸ್ಥಳವಿತ್ತು. ಅಂತೆಯೇ, ಅವರ ಕಥಾಫಲಗಳಿಗೆ ಬೇವಿನ ಹಣ್ಣುಗಳ
ಕಟುಮಧುರತೆಯಿದೆ. ಉದಿತೋದಿತ ಕೀರ್ತಿಯ ಈ ಕತೆಗಾರ್ತಿಯ
ಆಕಾಲಿಕ ಮರಣವು ಕಟು ಮಧುರ! ಅವರ ಸಹಾನುಭೂತಿಯು ಕಥಾ
ವಸ್ತುಗಳು ಕಟುಮಧುರ! ಈ ಎರಡರಿಂದುದುರುವ ಕಂಬನಿಗಳೂ ಕಟು
ಮಧುರ! ಒಂದಕ್ಕೊಂದು ಹೊಂದಿಕೆಯಾಗಿಯೇ ಇದೆ!

ಶ್ರೀಮತಿ ಗೌರಮ್ಮನವರು ಜೀವಿಸಿದ್ದೇ ೨೭ ವರ್ಷ. ಈ ಸಂಗ್ರಹದೊಳಗಿನ ೧೨ ಕತೆಗಳು ಅವರ ಆಯುಷ್ಯದ ಕೊನೆಯ ೭ ವರ್ಷಗಳಲ್ಲಿ ಬರೆದವುಗಳು. ಅವರ ಲೇಖನಾಭ್ಯಾಸವು ಆ ಮೊದಲು ೩–೪ ವರ್ಷಗಳಿಂದಲೂ ನಡೆದಿರಬೇಕೆಂದು ಅವರ ಕಾಗದ ಪತ್ರಗಳಿಂದ ಕಂಡುಬರುವದು. ಈ ಹನ್ನೆರಡೂ ಕತೆಗಳು ಒಂದಿಲ್ಲೊಂದು ವಿಧದಿಂದ ಹೆಣ್ಣುಗಂಡಿನ ಜೀವನದ, ಅದರ ಭಾಗ್ಯ–ದುರ್ಭಾಗ್ಯದ, ಅದರ ಪ್ರಣಯದ ಆಖ್ಯಾನಗಳಾಗಿವೆ. ಗಂಡಸಿನ ದೌರ್ಜನ್ಯ, ದಾರಿದ್ರ್ಯ–ಕುರೂಪತೆಗಳ ದೌರ್ಭಾಗ್ಯ, ಹೆಂಗಸಿನ ಯುಗಯುಗದ ದುರ್ವಿಧಿವಿಲಾಸ, ಸಮಾಜದ ವಿಪರೀತ ದುರ್ಬುದ್ಧಿ, ಶಿಷ್ಟಾಚಾರಗಳ ಅಂಧವಿರೋಧ ಇವೇ ಮೊದಲಾದ ಕಾರಣಗಳಿಂದ ಸ್ತ್ರೀಯರಿಗಾಗುವ ದುಃಖಕ್ಕಾಗಿ ಗೌರಮ್ಮನವರ ಕರುಳಿನ ತಂತಿಯಿಂದ ಮಿಡಿದು ಬಂದ ಮೂಕ ಶೋಕವು ಹೃದಯ ಭೇದಕವಾಗಿಯೂ ಹೃದಯ ಬೋಧಕವಾಗಿಯೂ ಆಗಿರುವದು.

ಎಲ್ಲ ಕತೆಗಳೂ ವಿಶೇಷವಾಗಿ ಹೆಣ್ಣಿನ ಹೃದಯವನ್ನೆ ಆವಿಷ್ಕರಿಸುತ್ತಿದ್ದರೂ ‘ಸನ್ಯಾಸಿ ರತ್ನ’ ‘ಹೋಗಿಯೇ ಬಿಟ್ಟಿದ್ದ’ ‘ಪ್ರಾಯಶ್ಚಿತ್ತ’ ಈ ಕತೆಗಳಲ್ಲಿ ಗಂಡಿನ ಮುಖವಾಗಿ ಪ್ರಣಯವನ್ನು ಪ್ರದರ್ಶಿಸಿದ್ದಾಗಿದೆ. ಮೊದಲಿನೆರಡು ಕತೆಗಳಲ್ಲಿ ಕತೆಗಾರಿಕೆಯಲ್ಲಿಯೂ ಕಟ್ಟಿನಲ್ಲಿಯೂ ಒಂದು ಚಮತ್ಕಾರವಿದೆ. ಮೂರನೆಯ ಕತೆಯಲ್ಲಿ ಗಂಡಿನಷ್ಟೆ ಹೆಣ್ಣು ಜೀವಾಳವಾಗಿದೆ. ದಿನಚರಿ, ಕಾಗದ ಮೊದಲಾದ ಕಥಾಕಾರಗಳನ್ನು ಅವರು ಕೈಯಾಡಿಸಿ ನೋಡಿದ್ದಾರೆ. ಎಲ್ಲದರಲ್ಲಿ ಅವರ ಕೈ ತಡೆಯಿಲ್ಲದೆ ಸಾಗುವದು. ಆದರೆ ಈ ಎಲ್ಲ ಕತೆಗಳ ನಿಜವಾದ ವೈಲಕ್ಷಣ್ಯವೆಂದರೆ ಮಾನಸ ವ್ಯಾಪಾರಗಳ ಹೇಳಿಕೆ. ‘ಕೌಸಲ್ಯಾನಂದನ’ ‘ಸುಳ್ಳುಸ್ವಪ್ನ’ ‘ವಾಣಿಯ ಸಮಸ್ಯೆ’ ‘ಮನುವಿನ ರಾಣಿ’ ‘..ಯಾರು’ ಮೊದಲಾದವುಗಳಲ್ಲಿ ಗೌರಮ್ಮನವರ ಸಹಾನುಭವವು ನಮ್ಮನ್ನು ಮೆಚ್ಚಿಸುವದು. ೧೯೩೩ರ ಅಕ್ಟೋಬರದಲ್ಲಿ ಬರೆದ ಅವರ ‘ಒಂದು ಪುಟ್ಟ ಚಿತ್ರ’ಕ್ಕೂ ೧೯೩೯ರ ಫೆಬ್ರುವರಿಯಲ್ಲಿ ಬರೆಯಲಾದ ‘ಅವಳ ಭಾಗ್ಯ’ಕ್ಕೂ ಆರು ವರ್ಷದ ಅಂತರವಿರುವಂತೆಯೇ ಕಿರಿದರಲ್ಲಿ ಹಿರಿದು ಭಾವ ತುಂಬುವ ಅವರ

ಕತೆಗಾರಿಕೆಯ ಬೆಳವಣಿಗೆಯಲ್ಲಾದ ಅಂತರವನ್ನು ಕಂಡು ಅವರ ಜೀವನದ ಕತೆ ಇಷ್ಟಕ್ಕೇ ಮುಗಿಯಿತೇ ! ಎನಿಸುವದು.

ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ; ಸೋದ್ದೇಶಲೇಖನದ ಸೂಚನೆಯಿದ್ದರೂ ಅವಾಸ್ತವ ಆರ್ಭಟೆಯಿಲ್ಲ; ಕಲೆಯು ಸ್ವೈಜವನ್ನು ಮರೆಮಾಚಿಲ್ಲ.— ಎಲ್ಲೆಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಛವು 'ಶ್ರೀನಿವಾಸ' 'ಆನಂದ' ರ ಕತೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕತೆಗಳ ಮಾದರಿಯಾಗಿ ಹೃದಯಂಗಮವಾಗುವದೆಂದು ನಾನು ನಂಬಿದ್ದೇನೆ.

ಸಾಧನಕೇರಿ
೨-೮-೩೯

**ದ. ರಾ. ಬೇಂದ್ರೆ**

## ತಂಗಿ ಗೌರವ್ವ

ಜಲದೇವತೆ ವನದೇವತೆ ಒಂದೆಡೆಯಲಿ ಸೇರಿ
ಬಿನದಿಸುತಿಹ ಹೊಳೆಮಡುವಿಗೆ ನೀನೀಸಲು ಹಾರಿ
ತಾಯೊಡಲನು ಕೂಸಾಟಕೆ ತಾಯ್ಮಡಲಿಗೆ ಬೀರಿ
ತೀರಲು, ಜಡವಾಗಳೆ ಕಾವೇರಿಯೆ ತಂಪೇರಿ?
ನೆನೆದರೆಯೇ ನಾ ನಡುಗುವೆ ಇದು ಆದುದದೆಂತೋ?
ಎಲ್ಲಿಂದೀ ಎಳೆಜೀವಕೆ ಸಾವೆಂಬುದು ಬಂತೋ?
ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು
ಜಗ್ಗದೆ ನಿನ್ನನು ಮೇಲಕೆ ನೀ ಮುಳುಗಿದೆಯೆಂತು?

ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳೆದೊ ಬಾನಂಚಿಗೆ ಕಾವೇರಿಯ ಕುವರಿ!
ಬೆಳುದಿಂಗಳೆ ಕರುವಿಟ್ಟಿತೊ ಈ ನಿರ್ಮಲಮೂರ್ತಿ
ಮೊದಲಿಲ್ಲಿಯೆ ಕುಡಿಬಿಟ್ಟಿತೊ ಮುಗುಳಿಟ್ಟಿತೊ ಕೀರ್ತಿ?
ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯ
ಬಾಳ್‌ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯ.

ಅಂಬಿಕಾತನಯದತ್ತ

# ಕಂಬನಿ

ಕನ್ನಡದ ತೋಟವನು ಕೃಷಿಮಾಡಿ ಜೀವನವ-
ನಿತ್ತಹೋದ ತೋಟಿಗರ ನೆನಪಿಂಗೆ
ಇನ್ನು ರಸಿಕರು ಸೊಗಬಡುತ್ತಿರೆ, ಒಸ ಮಾನಸದಲಿ
ಮರುಗದೋ ಅರಳು ಕಂಬನಿಗಳಾಗೆ!

೩–೮–೧೯೩೩ — ಮಲ್ಲಾರಿ

**ಬರಲಿವೆ!**

ಇದೇ ಲೇಖಕಿಯರಿಂದ—

**ಒಂದು ಕಾದಂಬರಿ**

**ಇನ್ನೊಂದು ಕಥಾಸಂಗ್ರಹ**

# ನಾನು ಕಂಡ ಗೌರಮ್ಮನವರು

ಜಮಖಂಡಿಯಲ್ಲಿ ಸೇರಿದ ಕ. ಸಾ. ಸಮ್ಮೇಲನದ ಮಂಟಪದಲ್ಲಿ ಗೌರವರ್ಣದ, ಅಷ್ಟು ಎತ್ತರವಲ್ಲದ, ತೆಳ್ಳಗಿದ್ದರೂ ಹಾಗೆ ಕಾಣದ, ಒಬ್ಬ ಮಹಿಳೆ ಕುಳಿತದ್ದನ್ನು ನೋಡಿದೆ. ಉಟ್ಟದ್ದೊಂದು ಖಾದಿಯ ಬಟ್ಟೆ; ತೊಟ್ಟದ್ದೂ ಖಾದಿಯೇ. ಮೂಗಿಗೊಂದು ಹರಳಿನ ಮೂಗುಬಟ್ಟು. ಉಳಿದ ಯಾವ ಆಭರಣವೂ ಇಲ್ಲ. ಕಣ್ಣುಗಳಲ್ಲಿ ಅದೊಂದು ಬಗೆಯ ಒಳನೋಟ. ಮುಖದಲ್ಲಿ ಅದೇನೋ ಒಂದು ಗಂಭೀರಭಾವ. ಆದರೂ ಯಾರಾದರೂ ಮಾತನಾಡಿಸಿದರೆ ಮೊದಲು ನಗೆ, ಆಮೇಲೆ ಮಾತು. ಒಮ್ಮೊಮ್ಮೆ ನಗುವಷ್ಟೇ ನುಸುಳಿ, ಮಾತುಬಾರದೆ ಉಳಿಯುತ್ತಿತ್ತು. ಒಮ್ಮೆ ನೋಡಿದರೆ ಸಾಕು; ಇವರ ಪರಿಚಯವಾಗಬೇಕು ಎನಿಸುವಂತಹ ವ್ಯಕ್ತಿತ್ವ.

ಅವರು ಕೊಡಗಿನವರೆಂದು ತಿಳಿದಾಗ ನನಗೆ ತುಂಬ ಕುತೂಹಲವಾಯಿತು. ಮತ್ತೆ ವಿಚಾರಿಸುವಾಗ ಅವರೇ **ಶ್ರೀಮತಿ ಗೌರಮ್ಮ—ಮಿಸೆಸ್ ಬಿ. ಟಿ. ಜಿ. ಕೃಷ್ಣ**—ಎಂದು ತಿಳಿದು ಬಹಳ ಸಂತೋಷವಾಯಿತು.

ಅದಕ್ಕೂ ಮೊದಲು "**ರಂಗವಲ್ಲಿ**" ಕಥಾಸಂಗ್ರಹದ ಕಾರ್ಯದಲ್ಲಿ, ಪತ್ರವ್ಯವಹಾರದಿಂದ ಅವರ ಪರಿಚಯವಾಗಿತ್ತು. ಹಿಂದೆ '**ಜಯ ಕರ್ನಾಟಕ**'ದ ಸಣ್ಣಕತೆಗಳ ಸ್ಪರ್ಧೆಯಲ್ಲಿ ಮೆಚ್ಚುಗೆಯನ್ನು ಪಡೆದ '**ಒಂದು ಪುಟ್ಟ ಚಿತ್ರ**' ಓದಿದಾಗ, ಅದನ್ನು ಬರೆದವರ ಬಗ್ಗೆ ಏನೋ

ಒಂದು ಬಗೆಯ ಆದರ ಹುಟ್ಟಿತ್ತು. ಮುಂದೆ ಒಂದೆರಡು ಕತೆಗಳು ‘ **ಜ. ಕ.**’ ದಲ್ಲಿ ಬಂದವು. ‘ **ಕೆಲವು ನೀಳ್ಗತೆಗಳು** ’ ಎಂಬ ಸಂಗ್ರಹದಲ್ಲಿಯ ‘ **ಕೌಸಲ್ಯಾನಂದನ** ’ ಎಂಬ ಕತೆ ನನಗೆ ಬಹಳ ಮೆಚ್ಚುಗೆಯಾಯಿತು. ಅದರಲ್ಲಿಯ ವಸ್ತು—ವಿವರಣೆ, ಆ ಕಲಾಪೂರ್ಣ ಮುಕ್ತಾಯ ನನಗೆ ತುಂಬ ಆನಂದಕೊಟ್ಟವು. ‘ ಅಂತೂ ಕನ್ನಡ ಮಹಿಳೆಯರೂ ಇಂತಹ ಉತ್ತಮ ಕತೆ ಬರೆಯುತ್ತಾರಲ್ಲ ! ’ ಎಂದು ಹೆಮ್ಮೆ ತಾಳಿದೆ. ಅಂದು ಪಟ್ಟ ಆ ಆನಂದ, ತಳೆದ ಆ ಹೆಮ್ಮೆ ನನ್ನನ್ನು ಹೆಣ್ಣು ಮಕ್ಕಳದೇ ಒಂದು ಕಥಾಸಂಗ್ರಹ ಪ್ರಕಟಿಸುವ ಸಾಹಸಕ್ಕೆಳೆಯಿತು. ಆ ಕೆಲಸ ‘ **ರಂಗವಲ್ಲಿ** ’ ಎಂಬ ಹೆಸರಿನಿಂದಾಯಿತು.

‘ **ರಂಗವಲ್ಲಿ** ’ ಯಲ್ಲಿಯ ಗೌರಮ್ಮನವರ ‘ **ಮನುವಿನ ರಾಣಿ** ’ ಎಂಬ ಕತೆಯ ಬಗ್ಗೆ ನನಗೆ ಬಂದ ಕೆಲವು ‘ ಪ್ರಶಂಸೆ ’ ಗಳನ್ನು ಅವರಿಗೆ ತಿಳಿಸಿದಾಗ, ಅವರು ತಮ್ಮ ಆ ಕತೆಯ ವಿಷಯಕ್ಕಿದ್ದ ಅತೃಪ್ತಿಯನ್ನು ತಾವೆ ಸೂಚಿಸಿದರು. ಆಗಲೇ ಅವರು ಹೊಗಳಿಕೆಗೆ ಹಿಗ್ಗುವವರಲ್ಲ—ಎನಿಸಿತು.

ಅದುವರೆಗೆ ಪ್ರಕಟವಾದ ಅವರ ಕತೆಗಳನ್ನೋದಿದ ನನಗೆ ಒಂದೇನೊ ಆಶೆ: ಇವರದೊಂದು ಕಥಾಸಂಗ್ರಹ ಪ್ರಕಟಿಸಬೇಕೆಂದು. ಆ ಮೊದಲು ನನಗೆ ಬರೆದ ಒಂದೆರಡು ಕಾಗದಗಳಲ್ಲಿಯೆ ಮೈವೆತ್ತುನಿಂತ ಅವರ ಸುಸಂಸ್ಕೃತತೆ, ಹಿರಿಯಾಸೆ ನನ್ನನ್ನು ಮತ್ತಿಷ್ಟು ಆ ಕೆಲಸಕ್ಕೆ ಒತ್ತಾಯ ಪಡಿಸಿದವು.

ಜಮಖಂಡಿಯಲ್ಲಿ ಅವರು ಗೌರಮ್ಮನವರೆಂದು ತಿಳಿದ ಮೇಲೆ ಅವರೊಡನೆ ಮಾತನಾಡಬೇಕೆಂಬ ಆಶೆಯಿಂದ ಅವರಿಳಿದ ಸ್ಥಳಕ್ಕೆ ಹೋದೆ. ಅಲ್ಲಿದ್ದ ನನ್ನ ಸ್ನೇಹಿತರೊಬ್ಬರು ಅವರ ಪರಿಚಯ ಮಾಡಿಸಿದರು. ಆಗ ಅವರು ಊಟಕ್ಕೆ ಕುಳಿತವರು ಎದ್ದು ‘ ನಮಸ್ಕಾರ ’ ಎಂದರು. ಅಂದಿನ ಆ ಮೊದಲ ಸಲದ ಅವರ ನಿಂತ ನಿಲುವು, ಆ ವಿನಯ, ಆ ಸಹಜವಾದ ನಗೆ ಇನ್ನೂ ನನ್ನ ಕಣ್ಣಮುಂದಿವೆ. ಊಟವಾದೊಡನೆ ನಾವಿಬ್ಬರೇ

ಒಂದೆಡೆಗೆ ಕುಳಿತೆವು. ಆಗ ನಮ್ಮ ಮಾತಿಗೆ '**ರಂಗವಲ್ಲಿ**' ಯೊಂದೇ ಆಹಾರವಾಗಿತ್ತು. ಭಿನ್ನಾಭಿಪ್ರಾಯಗಳ ವಾಗ್ಯುದ್ಧದಿಂದ ನಮ್ಮ ಪರಿಚಯ ಬೆಳೆಯಹತ್ತಿತು. ಅವರು ಆಗಾಗ ವಿನಯಪೂರ್ವಕವಾಗಿ 'ಬೇಸರವಾಯಿತೇ?' ಎಂದು ಕೇಳುತ್ತ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರು. ಅವರ ಆ ಸವಿನಯವಾದ ಮಾತುಗಳೆ ಅವರ ಸರಳಜೀವನದ ಕುರುಹು. ಅವರು ಸಭೆಯಲ್ಲಿ ಎಂದೂ ಮಾತಾಡಿದವರಲ್ಲ. ಅಂದು ಕವಿಸಮ್ಮೇಲನದಲ್ಲಿ 'ಏನಾದರೂ ಓದಿ' ಎಂದು ನಾವು ಕೇಳಿದ್ದಕ್ಕೆ ಅವರು 'ದಮ್ಮಯ್ಯ ಬೇಡಿ' ಎಂದು ಕೇಳಿಕೊಂಡರು; ಕೊಡಗಿನ ಪರವಾಗಿ ಅಧ್ಯಕ್ಷರ ಆಯ್ಕೆಯನ್ನು ಸಮರ್ಥಿಸುವುದಕ್ಕಾಗಿ ಎದ್ದುನಿಂತು ಹೇಳಿದ ಒಂದೇ ಮಾತಿಗೆ ಮೈಯೆಲ್ಲ ಬೆವತು ಕಾಲು ನಡುಗಿದವೆಂದು ಹೇಳಿದರು.

'ನೀವು ಹೊರಡುವಾಗ ನನಗೇಕೆ ತಿಳಿಸಲಿಲ್ಲ?' ಎಂದು ನಾನು ಕೇಳಿದ್ದಕ್ಕೆ 'ಏನೆಂದು ತಿಳಿಸುವುದು? ಕೊಡಗಿನ ಚಕ್ರವರ್ತಿನಿ—ನಾನು ಬರುತ್ತೇನೆಂದೇ? ಅಲ್ಲದೆ ಮೊದಲು ನಿಮ್ಮನ್ನು ನೋಡಿ ನನಗೆ ಗೊತ್ತಿತ್ತೇ?' ಎಂದು ನಕ್ಕು ನುಡಿದರು. ಅವರು ಯಾರೊಡನೆಯೂ ದುಡುಕಿ ಪರಿಚಯ ಮಾಡಿಕೊಳ್ಳುತ್ತಿದ್ದಿಲ್ಲ. 'ನೀವಾರು ?—ಎಂದು ಅವರು ಕೇಳಿದರೆ ನಾನೇನೆಂದು ಹೇಳುವುದು?' ಎನ್ನುತ್ತಿದ್ದರು.

ಜಮಖಂಡಿಯಿಂದ ತಿರುಗಿ ಬರುವಾಗ ಧಾರವಾಡದಲ್ಲಿ—ನಮ್ಮಲ್ಲಿ ಒಂದುದಿನ ಇಳಿಯಬೇಕೆಂದು ಕೇಳಿಕೊಂಡೆ. ಅವರು ಸಂತೋಷದಿಂದೊಪ್ಪಿಕೊಂಡರು. ಅಂದು ಧಾರವಾಡದ ನಿಲ್ದಾಣದಲ್ಲಿ ನಾವಿಳಿದಾಗ 'ಇಂದು ಎಂತಹ ಸಂತೋಷದ ದಿನ' ಎಂದು ನಾನೆಂದುದಕ್ಕೆ 'ಹೌದೋ?' ಎಂದು ಅವರು ನಗುತ್ತ ನುಡಿದರು.

ಗೌರಮ್ಮನವರು ಬಹಳ ವಿನೋದಿಗಳಾಗಿದ್ದರು. ಅವರ ಹೂವಿನಂತಹ ಮಾತುಗಳು ಯಾರ ಮನಸ್ಸನ್ನೂ ನೋಯಿಸದೆ ಅರಳಿಸುತ್ತಿದ್ದವು. ಅವರನ್ನು ಕಳಿಸಲು ಹುಬ್ಬಳ್ಳಿಯವರೆಗೆ ನಾನು ಹೋಗಿದ್ದೆ. ಹುಬ್ಬಳ್ಳಿ ಸ್ಟೇಶನ್ನಿನಲ್ಲಿ 'ನೀವು ಈಗ ನನ್ನ ಅತಿಥಿಗಳು; ಧಾರವಾಡದಿಂದ

ಹುಬ್ಬಳ್ಳಿ ಸಮುದ್ರ ಕಡೆಗೆ' ಎಂದು ಕಾಫಿ ಕೊಡಿಸಿದರು; ಕೂಡಿ ನಗುತ್ತ ಕುಡಿದೆವು. ಗಾಡಿ ಹೊರಡುವ ಸಮಯವಾಗಿತ್ತು. 'ಅಲ್ಲಿ ನೋಡಿ, ನಿಮ್ಮ ಮಾವ ಬರುತ್ತಿದ್ದಾರೆ' ಎಂದರವರು. ನಾನು ತಿರುಗಿ ನೋಡಿ, ನನ್ನ ಪರಿಚಿತರಾರನ್ನೂ ಕಾಣದೆ 'ಯಾರು?' ಎಂದೆ. 'ನೋಡಿ, ನಿಮ್ಮ ಮಾವ—ಜರದ ರುಮಾಲಿನ ಯಜಮಾನ' (ನನ್ನ ಕತೆಯಲ್ಲಿಯ ಒಂದು ಪಾತ್ರ. ಧಾರವಾಡದಲ್ಲಿ ಆ ಕತೆಯನ್ನು ಓದಿ ತೋರಿಸಿದ್ದೆ) ಎಂದರು. ನಾವೆಲ್ಲ ಗೊಳ್ಳೆಂದು ನಕ್ಕೆವು. ಸಿಳ್ಳುಹಾಕಿ ಗಾಡಿ ಹೊರಟಿತು. ಕಿಡಕಿಯಲ್ಲಿ ಮುಖ ಹಾಕಿ ಅವರು ನೋಡುತ್ತಿದ್ದರು. ನಾನು ಹಾಗೆಯೆ ಕಲ್ಗೊಂಬೆಯಂತೆ ನೋಡುತ್ತ ನಿಂತಿದ್ದೆ. ಗಾಡಿ ಹೊರಟು ಹೋಗಿದೆ; ಆದರೆ ಕಿಡಕಿಯಲ್ಲಿ ನಗುತ್ತ ಕುಳಿತ ಗೌರಮ್ಮ ಇನ್ನೂ ಕಾಣುತ್ತಿದ್ದಾರೆ.

ಅವರ 'ಪತ್ರ ಕತೆ'ಗಳನ್ನೋದಿ ಸಂತೋಷಪಟ್ಟ ನನಗೆ ಅವರಿಂದ ಬರುತ್ತಿದ್ದ ಕಾಗದಗಳು ಮತ್ತಿಷ್ಟು ಸಂತೋಷ ಕೊಟ್ಟಿವೆ. ಅವರ ಸುಂದರವಾದ-ಹಗುರಾದ ಮಾತುಗಳು, ಮಿತವರಿತ ವಿನೋದ, ಮೋಹಕವಾದ ಶೈಲಿ—ಹೃದಯವನ್ನರಳಿಸುವಂತಹವು. ಅವರೊಡನೆ ಪರಿಚಯವಾದಂದಿನಿಂದ—ಕಳೆದ ಒಂದು ವರ್ಷದಲ್ಲಿ—ನನಗೆ ಅವರ ಪತ್ರಲಾಭ ಅನಂತವಾಗಿ ದೊರೆತಿದೆ.

ನನ್ನದೊಂದು ಕತೆಯನ್ನು ಅವರ ಅವಲೋಕನೆಗೆಂದು ಕಳಿಸಿದಾಗ ಕೂಡಲೆ ಅವರ ಕಾಗದ ಬಂತು. ಹೀಗೆ ಬರೆದಿದ್ದರು:*

> 'ನಿಮ್ಮ ಕಾಗದ ಬಂದಾಗ ನಾನು ಟೆನ್ನೀಸು ಆಡುತ್ತಿದ್ದೆ. ಟಪ್ಪಾಲಿನವನು ಕಾಗದ ಕೊಟ್ಟೊಡನೆಯೆ ನೋಡಿದೆ—ಯಾರದೆಂದು; ನಿಮ್ಮದು! ಇಷ್ಟರ ವರೆಗೆ ಗೆಲ್ಲುತ್ತ ಬಂದವಳು ನಿಮ್ಮ ಕಾಗದ ಓದುವ ಆತುರತೆಯಲ್ಲಿ ಸೋತೇ ಹೋದೆ. ನನಗೆ ಇದಿ

* ಇಲ್ಲಿ ಬರೆದ ಪತ್ರದ ಮಾತುಗಳನ್ನು ನನಗೆ ಅವರು ಬರೆದ ಪತ್ರಗಳಿಂದಲೇ ಎತ್ತಿಕೊಂಡಿದ್ದೇನೆ. —ಲೇಖಕ

ರಾಗಿ ಆಡುತ್ತಿದ್ದವರು ನಿಮ್ಮನ್ನು ಬಹಳ ಬಹಳ ಹೊಗಳಿದರು; ನಿಮ್ಮ ಕಾಗದದಿಂದಾಗಿ ಗೆಲವು ತನಗಾಯಿತಲ್ಲಾ—ಎಂದು. ನಾನು ನಿಮ್ಮ ಕಾಗದ ಸ್ವಲ್ಪ ದೂರಿದೆನೆಂದರೆ ನಿಮಗೆ ಕೋಪ ಬರುವುದೇನೋ. ಅಂತೂ ನಾವಿಬ್ಬರೂ ಜೊತೆಯಾಗಿಯೇ ಓದಿ ದೆವು. ಓದಿ, ಸೋತ ಬೇಸರ ಮರೆಯಿತು; ಅಷ್ಟೊಂದು ಚೆನ್ನಾ ಗಿದೆ ನಿಮ್ಮ '**ಕುಳಿತ ಕನ್ನೆ**'.

'ನನಗೆ ಎಲ್ಲ ಕಡೆಯಿಂದಲೂ ಪತ್ರ ಬರುತ್ತಿರಬೇಕು—ಎಂದರೆ ಬಹಳ ಇಷ್ಟ. ಆದರೆ ನಾನು ಸೋಮಾರಿ, ಸಮಯಕ್ಕೆ ಉತ್ತರ ಬರೆಯದೆ ಎಷ್ಟೋ ಜನರನ್ನು ಬೇಸರುಪಡಿಸಿದ್ದೇನೆ ಎಂದು ಹೇಳುತ್ತಿದರು.

ಗೌರಮ್ಮನವರು ಕತೆ ಬರೆದ ಮೇಲೆ ಅದಕ್ಕೊಂದು ಹೆಸರಿಡುವು ದಕ್ಕೆ ತುಂಬ ಪೇಚಾಡುತ್ತಿದ್ದರು. ಎಲ್ಲರನ್ನೂ ಕೇಳುತ್ತಿದ್ದರು. 'ನಾನು **ಶೇಕ್ಸ್‌ಪಿಯರ್** ಆಗಿದ್ದರೆ 'As you like it' ಎಂದು ಬಿಡುತ್ತಿದ್ದೆ' ಎನ್ನುತ್ತಿದ್ದರು. ಯಾರಾದರೂ ತಮಗೆ ಒಪ್ಪಿಗೆಯಾಗಬಹುದಾದ ಹೆಸ ರನ್ನು ಸೂಚಿಸಿದರೆ ಅವರಿಗೆ ಬಹಳ ಆನಂದವಾಗುತ್ತಿತ್ತು. ನಾನೊಮ್ಮೆ ಅವರಿಗೆ ತಡಮಾಡಿ ಬರೆದೆ; ಅವರದೊಂದು ಕತೆ ಬಂದಿತ್ತು. 'ಅದಕ್ಕೊಂದು ಚೆಂದವಾದ ಹೆಸರಿಟ್ಟು ನಿಮ್ಮ ನಿಜವಾದ ಅಭಿಪ್ರಾಯ ತಿಳಿಸಿರಿ' ಎಂದು ಬರೆದಿದ್ದರು. ಕತೆಗೆ ಹೆಸರಿಡುವ ವಿಚಾರದಲ್ಲಿ ನನಗೆ ಬೇಗನೆ ಬರೆಯುವು ದಾಗಲಿಲ್ಲ. ಅವರು ಬೇಸತ್ತು ಬರೆದರು: 'ಏನು ನೀವೆಲ್ಲಾ ನನ್ನ ಉದಾಸೀ ನಕ್ಕೆ ಪ್ರತಿ ಉದಾಸೀನ ಮಾಡಿ ಸತ್ಯಾಗ್ರಹ ಮಾಡುವಂತೆ ತೋರುತ್ತೆ! ನೀವು ರಾಮದುರ್ಗದವರು ತಾನೆ! ಮಾಡಿ ಸತ್ಯಾಗ್ರಹ!' ಎಂದು.

ಗೌರಮ್ಮನವರಲ್ಲಿ ಇದ್ದ ಮಾತನ್ನು ಎತ್ತಿ ಹಿಡಿಯುವ ದಿಟ್ಟತನ ವಿತ್ತು. ಅವರ ದೃಷ್ಟಿಯಲ್ಲಿ ಒಂದು ವಿಮರ್ಶಕ ಶಕ್ತಿಯಿತ್ತು. ಯಾರಿಗೂ ಸೊಪ್ಪುಹಾಕದೆ ತಮಗೆ ತೋರಿದ ಮಾತುಗಳನ್ನು ಗಂಭೀರವಾಗಿ ಹೇಳು ತ್ತಿದ್ದರು. ತಮಗೆ ಸೇರದ ಮಾತನ್ನು ಅಷ್ಟೇ ಸ್ಪಷ್ಟವಾಗಿ ಖಂಡಿಸುತ್ತಿ ದ್ದರು. ಹೆಣ್ಣುಮಕ್ಕಳು ಬರೆಯುವ ಸಾಹಿತ್ಯ ಒಳ್ಳೆಯದಾಗಬೇಕು... ಅದೊಂದು ಮಟ್ಟಕ್ಕೆ ಬರಬೇಕು..ಎಂಬ ಆಶೆ ಬಹಳವಾಗಿತ್ತವರಿಗೆ.

'ಇದು ಹೆಣ್ಣುಮಕ್ಕಳ ಕೃತಿ—ಎಂಬ ಪೊಳ್ಳುಸಹಾನುಭೂತಿಯ ಹೊರೆಯನ್ನು ನಾವೆಷ್ಟು ದಿನ ಹೊತ್ತಿರಬೇಕು ? ಇದರಿಂದ ಗಂಡಸರು ನಮ್ಮ ಸಾಹಿತ್ಯವನ್ನು ತೃಪ್ತಿದಾಯಕವಾಗಿ ಒಪ್ಪಿದಂತಾಯಿತೇ? ಅವರು ನಮ್ಮ ಸಾಹಿತ್ಯವನ್ನು ಗಂಡಸರು ಬರೆಯುವ ಸಾಹಿತ್ಯವನ್ನು ನೋಡುವ ದೃಷ್ಟಿಯಲ್ಲೊಮ್ಮೆ ನೋಡಲಿ—ಇಲ್ಲ ನೋಡಲಾರರವರು. ಎಂತಲೆ ನಿರ್ಭಾಗ್ಯ '**ರಂಗವಲ್ಲಿ**'ಯ ಅದೃಷ್ಟಕ್ಕೆ ಒಂದು ಸರಿಯಾದ ವಿಮರ್ಶೆ ಬರೆಯುವ ಪುಣ್ಯಾತ್ಮರೂ ಇಲ್ಲ!' ಎನ್ನುತ್ತಿದ್ದರು.

ಗೌರಮ್ಮನವರ ಎಳೆಯತನದಲ್ಲಿಯೇ ಅವರ ತಾಯಿ ತೀರಿದ್ದರು. ಒಮ್ಮೊಮ್ಮೆ ಅವರಿಗೆ ಉಂಟಾಗುವ ತಾಯಿಯ ನೆನಪು ಅವರನ್ನು ಬಹಳ ಶೋಕಕ್ಕೀಡುಮಾಡುತ್ತಿತ್ತು. ನಮ್ಮ ತಾಯಿಯನ್ನು ಕಂಡರೆ ಗೌರಮ್ಮನವರಿಗೆ ಬಹಳ ಇಷ್ಟ. ನಮ್ಮ ತಾಯಿಗೂ ಗೌರಮ್ಮನವರೆಂದರೆ ಅಷ್ಟು ಪ್ರೀತಿ. 'ನಮ್ಮ ಮನೆಗೆ ಅಮ್ಮನನ್ನು ಕಳಿಸಿಕೊಡಿ; ಈಗ ಇಲ್ಲಿ ಕಾವೇರಿ ಜಾತ್ರೆ. ಅವರಿಗೆ ಕಾವೇರಿ ಸ್ನಾನ ಮಾಡಿಸಿ ಕೂಡಲೆ ಕಳಿಸುವ ಭಾರ ಹೊತ್ತುಕೊಳ್ಳುತ್ತೇನೆ!' ಎಂದು ಬರೆದರು. ನಮ್ಮ ತಾಯಿ ಹೋಗಲು ಆತುರಪಟ್ಟರೂ ಬಹಳ ದೂರ ಎಂದು ನಾವು ಕಳಿಸಲಿಲ್ಲ. 'ಅಮ್ಮ ಮಗಳ ಮನೆಗೆ ಹೋಗಲು ಹಟ ಹಿಡಿದಿದ್ದಳು' ಎಂದು ಬರೆದು ಕಳಿಸದಿದ್ದುದಕ್ಕೆ ಏನೇನೋ ಕಾರಣ ಒಡ್ಡಿ ಕ್ಷಮೆ ಬೇಡಿಕೊಂಡಿದ್ದೆ. ಕೂಡಲೆ ಉತ್ತರ ಬಂತು:

> 'ಅಮ್ಮ ಮಗಳ ಮನೆಗೆ ಹೋಗಲು ಹಟ ಹಿಡಿದಳು—ಎಂದು ಬರೆದಿದ್ದೀರಿ. ನಿಮಗೆ ನಿಜವನ್ನು ಹೇಳುವುದಾದರೆ ನಾನು ಇಷ್ಟೊಂದು ಬೇಗ ಪ್ರತ್ಯುತ್ತರ ಬರೆಯಲು ಅದೊಂದು ವಾಕ್ಯ ಮುಖ್ಯಕಾರಣವೆಂದು ಹೇಳಬೇಕು. 'ಅಮ್ಮ ಮಗಳ ಮನೆಗೆ ಹೋಗಲು ಹಟ ಹಿಡಿದಳು' ಎಂಬುದನ್ನು ಓದಿ ನನಗೆ ಎಷ್ಟೊಂದು ಸಂತೋಷವಾಯಿತೆಂಬುದು ನಿಮಗೆ ಹೇಗೆ ತಿಳಿಯಬೇಕು? ನೀವು ಹುಡುಗಿಯಲ್ಲ—ನಾಲವುದಕ್ಕೆ ನಿಮ್ಮ ಅಮ್ಮ ಯಾವಾಗಲೂ ನಿಮ್ಮ ಹತ್ತಿರದಲ್ಲೇ ಇರುತ್ತಾರೆ. ಅವರಿಂದಲೇ ಅವರ ಬೆಲೆ ನಿಮಗೆ

ತಿಳಿಯಲಾರದು. ನನಗೆ—ನನಗೆ ಅವ್ವ, ನಾನು **ಬೇಬಿ** (ಗೌರಮ್ಮನವರ ಆರು ವರ್ಷದ ಮಗು, ವಸಂತ) ಗಿಂತಲೂ ಚಿಕ್ಕವಳಾಗಿರುವಾಗಿನಿಂದಲೂ ಇಲ್ಲ. ಹಾಗವಳು ಇಲ್ಲವೆಂದು ತಿಳಿದುಕೊಳ್ಳುವ ಶಕ್ತಿ ನನಗೆ ಬರುವ ಮೊದಲೇ ನನಗವಳು ಇಲ್ಲವಾಗಿ ಬಿಟ್ಟಿದ್ದಳು. ಮತ್ತೆ 'ನನಗೂ ಎಲ್ಲರಂತೆ ಅವ್ವನಿಲ್ಲ' ಎಂದು ತಿಳಿದುಕೊಳ್ಳುವಂತಾಗುವಾಗ 'ಇಲ್ಲದಿದ್ದರೂ ತೊಂದರೆ ಇಲ್ಲ' ಎನ್ನುವಂತೆ ಅಭ್ಯಾಸವಾಗಿ ಹೋಗಿತ್ತು. ಆದರೂ—ಆದರೂ ನೋಡಿ, ಎಲ್ಲ ಹುಡುಗಿಯರು 'ನಮ್ಮವ್ವ—ನಮ್ಮವ್ವ ಹಾಗಿದ್ದಾರೆ—ಹೀಗಿದ್ದಾರೆ' ಎಂದಂದುಕೊಳ್ಳುವಾಗ 'ನನಗೂ ಅವ್ವ ಏಕಿರಬಾರದಿತ್ತು!' ಎನಿಸದಿರುವದಿಲ್ಲ. ಈಗೆರಡು ಮೂರು ತಿಂಗಳಾಯಿತು; ನಾನು ಮಡಿಕೇರಿಗೆ ಹೋಗಿದ್ದಾಗ ನನ್ನಣ್ಣ—ನನಗಿಂತಲೂ ಏಳೆಂಟು ವರ್ಷಗಳಿಗೆ ಹಿರಿಯವ—ಅವನಿಗೆ ನಮ್ಮ ಅವ್ವನ ನೆನಪು ಚೆನ್ನಾಗಿದೆ—ಆಗ ಏಕೋ ಮಾತಿಗೆ ನೋಡಿ, **ಬೇಬಿ** ತಂಟೆಮಾಡುತ್ತಿದ್ದ. ನಾನು ಅವನನ್ನು ಗದರಿಸಿದೆ. ಅದಕ್ಕೆ ಅಣ್ಣ 'ನೀನು ನೋಡು ಗೌರಿ, ನೀನು ಚಿಕ್ಕವಳಾಗಿರುವಾಗ ಇವನಿಗಿಂತಲೂ ಹೆಚ್ಚು ತಂಟೆಮಾಡಿ ಅಮ್ಮನನ್ನು ಗೋಳಾಡಿಸುತ್ತಿದ್ದೆ. ಈಗ ಮಾತ್ರ ಅವನನ್ನು ಗದರಿಸುತ್ತೀ. ನಿನ್ನಷ್ಟೇ ತುಂಟತನ ಇವನಿಗಿದ್ದಿದ್ದರೆ ನೀನೇನು ಮಾಡುತ್ತಿದ್ದೆಯೋ; ಅಮ್ಮ ಇರಬೇಕಿತ್ತು ಈಗ' ಎಂದ. ಅಣ್ಣ ನನ್ನನ್ನು ತಮಾಷೆ ಮಾಡುವ ಸಲುವಾಗಿ ಆಡಿದ ಮಾತುಗಳಿವು; ಆದರೂ 'ಅಮ್ಮ ಇರಬೇಕಿತ್ತು ಈಗ' ಎಂದು ಅವನೆನ್ನುವಾಗ 'ಅಮ್ಮನಿಲ್ಲವಲ್ಲಾ' ಎಂದೂ—'ಅಮ್ಮ ಇದ್ದಿದ್ದರೆ ನಾನು ಈಗ ಬೇಬಿಯನ್ನು ಪ್ರೀತಿಸುವಷ್ಟೇ ಅವಳೂ ನನ್ನನ್ನು ಪ್ರೀತಿಸುತ್ತಿದ್ದಳಲ್ಲಾ' ಎಂದೂ—ನೋಡಿ, ಏನೇನೋ ಹುಚ್ಚು ಯೋಚನೆಗಳು ತಲೆತುಂಬ ತುಂಬಿದವು. ನಿಮಗಿದನ್ನೆಲ್ಲಾ ನಾನೇಕೆ ಬರೆಯುತ್ತೇನೆಂಬುದು ನನಗೇ ತಿಳಿಯದು. 'ಅವ್ವ ಮಗಳ ಮನೆಗೆ ಹೋಗಲು ಹಟ ಹಿಡಿದಳು' ಎಂದು ಬರೆದಿದ್ದೀರಿ. ಅದನ್ನೋದುವಾಗ ಏಕೋ ಇದೆಲ್ಲಾ ಬಂದು ಹೋಯಿತು. ಅಂತೂ ಅವರು

ನನ್ನನ್ನು ಮಗಳೆಂದು ತಿಳಿದು ನಮ್ಮ ಮನೆಗೆ ಬರಲು ಹಟಹಿಡಿದ
ರಲ್ಲ ಎಂಬ ಆನಂದದಲ್ಲಿ—' ಎಂದೆಲ್ಲಾ ಬರೆದರು.

ಒಮ್ಮೆ ನಾನು ಕೊಡಗಿಗೆ ಹೋಗುವುದನ್ನು ನಿರ್ಧರಿಸಿದೆ. ಹಾಗೆ ಗೌರಮ್ಮನವರಿಗೆ ಕಾಗದ ಬರೆದೆ. ಅವರು "ಬೇಗಬನ್ನಿ" ಎಂದು ಬರೆದರು. ನನಗೆ ಬೆಂಗಳೂರು ಮೈಸೂರುಗಳಲ್ಲಿ ಕೆಲಸವಿದ್ದುದರಿಂದ ಹೇಳಿದ ಸಮಯಕ್ಕೆ ಹೋಗಲಾಗಲಿಲ್ಲ. ಅಂತೂ ಒಂದು ದಿನ ಮೈಸೂರಲ್ಲಿ ಕೊಡಗಿನ ಬಸ್ಸು ಹತ್ತಿದೆ. ನಾಲ್ಕು ಗಂಟೆಗೆ ಸುಂಟಿಕೊಪ್ಪಕ್ಕೆ (ಗೌರಮ್ಮನವರ ಊರು) ತಲಪುತ್ತದೆಂದು ಹೇಳಿದ್ದರು. ದಾರಿಯಲ್ಲಿ ವನಸಿರಿ ಮೈವೆತ್ತುನಿಂತಿತ್ತು. ಆದರೂ ನನಗೆ ಅತ್ತ ಲಕ್ಷ್ಯವಿದ್ದಿಲ್ಲ. ನನ್ನ ದೃಷ್ಟಿ ನನ್ನ ಹತ್ತಿರ ಕುಳಿತವರ ಕೈಗಡಿಯಾರದಲ್ಲಿಯ ತಾಸಿನ ಮುಳ್ಳಿನ ಕಡೆಗಿತ್ತು. ನಾಲ್ಕು ಆಗಲೊಲ್ಲದು; ಕೊಡಗಿನ ದಾರಿಯೂ ಮುಗಿಯಲೊಲ್ಲದು. ನನಗೆ ಬಹಳ ಬೇಸರವೆನಿಸಿತು. 'ಈ ಗಡಿಯಾರ ಮೋಟರಿನವರದಿರಬೇಕು' ಎಂದೆ. ಅದಕ್ಕೆ ಪ್ರತಿಯಾಗಿ ಮೋಟರಿನ ಕಂಡಕ್ಟರ್ 'ನಮ್ಮ ಬಸ್ ನಿಮ್ಮಲ್ಲಿಯ ಬಸ್ಸಿನಂತಲ್ಲ ಸಾರ್' ಎಂದ.

ನಾನು ಈ ಮೊದಲು ಗೌರಮ್ಮನವರ ಮನೆ ನೋಡಿದ್ದಿಲ್ಲ; ಆದರೂ ತಲೆ ಏನೇನೋ ಚಿಂತಿಸುತ್ತಿತ್ತು: 'ಒಂದು ಸುಂದರವಾದ ಮನೆ. ಅದರಲ್ಲಿ ಅದರ ಸ್ವಾಮಿನಿ—ಗೌರಮ್ಮ—ತನ್ನ ಪತಿಯೊಡನೆ ಕುಳಿತಿದ್ದಾರೆ. ನಡುನಡುವೆ ನಗೆ. .' ಬಸ್ಸಿನವನು '**ಹೋಲ್ ಡಾನ್**' ಎಂದ; 'ಸುಂಟಿಕೊಪ್ಪ ಸಾರ್' ಎಂದ. ನಾನಿಳಿದೆ. ನಾನು ಬರುವ ದಿವಸ ತಿಳಿಸಿ, ತಪ್ಪಿಸಿ, ಅಂದು ಬರುತ್ತೇನೆಂದು ತಿಳಿಸಿದ್ದಿಲ್ಲವಾದರೂ ಒಬ್ಬನು ಬಂದು 'ಕುಲಕರ್ಣಿಯವರೇ?' ಎಂದ. ನಾನು 'ಯಾರು?' ಎಂದೆ. 'ಗೌರಮ್ಮನವರು ತಮ್ಮನ್ನು ಕರೆದುಕೊಂಡು ಬರಲು ಕಳಿಸಿದ್ದಾರೆ' ಎಂದ. ಅವರ ಟಪ್ಪಾಲಿಗೆ ಬರುವ ಹುಡುಗನಾತ. ನಾನು ಅವನೊಡನೆ ಹೊರಟೆ. "ನಿಮಗೆ ತುಂಬ ಕಾಗದ ಬಂದಿದೆ ಸಾರ್, ಅಮ್ಮಾ ಅವರು ನಿಮ್ಮ ದಾರೀ ನೋಡಿ ಬೇಸತ್ತಿದ್ದಾರೆ ಸಾರ್" ಎಂದ. ನನಗೆ ಹಿಗ್ಗು ಉಕ್ಕಿ ಬರುತ್ತಿತ್ತು 'ಎಂಥ ಜನ ಇವರು!' ಎಂದು ಮೆಚ್ಚಿದೆ; ಕೂಡಿ ಹೊರಟೆವು.

ಅಂತೂ ಅಲ್ಲಿಂದ ಹೊರಟು ಸುಂದರವಾದ ಕಾಫಿತೋಟಗಳನ್ನು ನೋಡುತ್ತ, ಸೀಳಿದ ದಾರಿಗುಂಟ ಸಾಗಿದೆವು. ದಾರಿಯಲ್ಲಿಯ ಗಿಡಗಳು ದಾರಿಕಾರರನ್ನು ಸ್ವಾಗತಿಸಲು ನಿಂತಿವೆ. ಚವರಿ ಗಿಡಗಳು ಚವರಿ ಬೀಸಿದವು. ದಟ್ಟವಾದ ನೆಳಲು. ಆಗಾಗ ರಿಟಾಯರು ಆಗಲು ಬಂದ ಸೂರ್ಯನ ಹೊಂಗಿರಣಗಳು ತೂರಿ ಬರುತ್ತಿದ್ದುವು. ಎಂತಹ ಸೊಗಸಿನ ನಾಡಿದು! ಆದುದರಿಂದಲೆ ಗೌರಮ್ಮನವರು ಅಷ್ಟು ರಸಿಕರು; ಅಂತಹ ಸೌಂದರ್ಯೋಪಾಸಕರು!

ಒಂದು ಬಯಲಿಗೆ ಬಂದೆವು. ಅಲ್ಲಿಯೇ ಗೌರಮ್ಮನವರ ಪತಿದೈವ ಮ್ಯಾನೆಜರರಾಗಿದ್ದ ಎಸ್ಟೇಟಿನ ಒಡೆಯರ ಮನೆ. ಒಂದೆಡೆಗೆ ಎತ್ತರವಾಗಿ ದೂರದವರೆಗೆ ಹಬ್ಬಿದ ಬೆಟ್ಟವು ಮಂಜಿನ ಕಿರೀಟ ಧರಿಸಿ ನಿಂತಿದೆ. ಇನ್ನೊಂಡೆಗೆ ದೂರದವರೆಗೆ ಬಯಲು ಹಸಿರು ಹಾಸಿ ಹೊದ್ದಿದೆ. ಅಂತಹ ರಮಣೀಯ ಸ್ಥಳದಲ್ಲಿ **ಶ್ರೀ. ಮಂಜುನಾಥಯ್ಯ**ನವರ ಬಂಗ್ಲೆ. ಅಲ್ಲಿಂದ ಎರಡು ಫರ್ಲಾಂಗು ದೂರ ಗೌರಮ್ಮನವರ ಬಂಗ್ಲೆ. ಅದಕ್ಕೂ ಒಂದು ಕಾಫಿಯ ತೋಟದಲ್ಲಿ ಸೇರಿ ಹೋಗಬೇಕು. ಹೋಗುತ್ತಲೆ ಸ್ವಲ್ಪ ಎತ್ತರದಲ್ಲಿ ಒಂದು ಬಂಗ್ಲೆ. ಅದರ ಸುತ್ತು ಮುತ್ತು ಒಂದು ಮುಂದು ಹೂದೋಟ. ನಾನು ಹೋದಾಗ ಗೌರಮ್ಮನವರೇ 'ಹೂಗಿಡಗಳಿಗೆ ನೀರೆರೆ'ಯುತ್ತಿದ್ದರು. ಒಂದು ನಾಯಿ 'ವೌವ್' ಎಂದಿತು. ಗೌರಮ್ಮನವರು '**ಓ**' ಎಂದು ಓಡಿಬಂದರು. ಅಂದಿನ ಅದೇ ನಗೆ, ಅದೇ ನಿಲುವು, ಅದೇ ಬಟ್ಟೆ, ಅದೇ ವೇಷ-ಭೂಷಣ! 'ನಮಸ್ಕಾರ ಮಹಾಶಯರೇ, ಅಂತೂ ಬಮ್ಮೆ ಬಂದಿರಾ?' ಎಂದರು. ಉಕ್ಕಿಬರುವ ನಗೆಗೆ ಸ್ವಾತಂತ್ರ್ಯ ಕೊಟ್ಟುಬಿಟ್ಟೆ. ಸ್ವಲ್ಪ ನಿಲ್ಲಿ, ನಿಮ್ಮನ್ನು ಬೈಯಬೇಕಾಗಿದೆ; ಇಲ್ಲ, ಒಳಗೆ ಬನ್ನಿ; ಅಲ್ಲಿಯೇ ಬಯ್ಯುತ್ತೇನೆ!" ಎಂದು ಒಳಗೆ ಕರೆದೊಯ್ದರು.

ಒಂದು ಕೋಚು, ನಾಲ್ಕು ಖುರ್ಚಿ. ನಡುನಡುವೆ ಹೂಪಾತ್ರೆಗಳನ್ನು ಹೊತ್ತ ಚಿಕ್ಕಮೇಜುಗಳು. ಒಂದೆಡೆಗೆ ಚಾಪೆ ಹಾಸಿದೆ. ನಾಲ್ಕು ಮೂಲೆಗೆ ನಾಲ್ಕು ಸಣ್ಣ ಮೇಜುಗಳು ಖಾದಿಯ ಬಟ್ಟೆ ಹೊದ್ದು ಹೂಪಾತ್ರೆಗಳಿಂದಲಂಕೃತವಾಗಿವೆ. ಸಾಲದುದಕ್ಕೆ ಬೇಸಿಯ ನಾನಾ

ಭಂಗಿಯಲ್ಲಿ ನಿಂತ, ಆಡಿದ, ಓಡುತ್ತಿರುವಾಗಿನ ಭಾವಚಿತ್ರಗಳು. ಅಲ್ಲಿ ಗೌರಮ್ಮ ಕೂಡುವುದು ಕಡಿಮೆ. ಅದನ್ನು ದಾಟಿ ಮೊಗಸಾಲೆ; ಮುಂದೆ ಹೂದೋಟ. ತರತರದ ಹೂಗಿಡಗಳು–ಎಲೆಬಳ್ಳಿ; ಅರ್ಧಪರಿಘದಂತೆ ಒಂದು ಕಿತ್ತಳೆಯ ಸಾಲು ಹೂದೋಟವನ್ನಾಕ್ರಮಿಸಿದೆ. ಗೊಂಚಲು ಗೊಂಚಲಾಗಿ ಕಿತ್ತಳೆಗಳು ಗಿಡಗಳನ್ನು ಬಾಗಿಸಿವೆ. ಅಲ್ಲಿ ಒಂದು ದೊಡ್ಡ ಮೇಜು. ಅದರ ಮೇಲೆ ಲೇಖನ ಸಾಹಿತ್ಯ–ಗೌರಮ್ಮನವರ ಸಾಹಿತ್ಯ—ಇಂಗ್ಲೀಷು ಕನ್ನಡ ಪುಸ್ತಕ–ಪತ್ರಿಕೆಗಳು ಹರಡಿವೆ. ಅಲ್ಲಿ ನಾಲ್ಕು ಖುರ್ಚಿಗಳು ಮೇಜನ್ನು ಸುತ್ತುವರಿದಿವೆ; ಒಂದು ಮುರುಕು ಖುರ್ಚಿ ಒಂದು ಮೂಲೆಗಿದೆ. ಅದರ ಬೆತ್ತದ ಜಾಳಿಗೆ ಹರಿದಿದೆ. ಅದರ ಬುಡದಲ್ಲೊಂದು ಸ್ಟೂಲನ್ನು ಸರಿಸಲಾಗಿದೆ. ನನಗೆ ಅದನ್ನು ನೋಡಿ ಆಶ್ಚರ್ಯವಾಯಿತು. ಅದರ ಹತ್ತಿರ ಹಾಯ್ದೆ; “ಹಾ! ಅದು ನನ್ನ ಸ್ಫೂರ್ತಿದಾಯಕ ಖುರ್ಚಿ, ನೀವು ಓದಿದ ಕತೆಗಳು ಅದರ ವರಗಳು. ನೀವು ಇತ್ತ ಬರಬೇಡಿ. ನನ್ನ ಸ್ಫೂರ್ತಿ ನಿಮ್ಮದಾದೀತು” ಎಂದು ಒಂದೇ ಉಸುರಿನಲ್ಲಿ ಹೇಳಿದರು. ನಾನು ಹಟದಿಂದ ಅದರ ಕಡೆಗೆ ಹೋದೆ. ಬುಡದ ಸ್ಟೂಲನ್ನು ಎಳೆದರು–ಜಾಳಿಗೆ ಜೊಳ್ಳು ಬಿತ್ತು. ನಾವಿಬ್ಬರೂ ಮೇಜಿನ ಹತ್ತಿರಬಂದೆವು. ಒಂದೊಂದು ಆಸನವನ್ನು ಆಕ್ರಮಿಸಿದೆವು. “ಎಲ್ಲ ಸುದ್ದಿ ಹೇಳಿ” ಎಂದರು. “ನನ್ನ ಕಾಗದಗಳಿವೆಯೇ?” ಎಂದೆ. “ಅದಿರಲಿ–ಮೊದಲು ಸುದ್ದಿ ಹೇಳಿ” ಎಂದರು. ನಾನು ಕೈಯಲ್ಲಿದ್ದ ವೃತ್ತಪತ್ರ ಚಾಚಿದೆ. ಅದನ್ನಿಸಿದುಕೊಂಡು ಮೇಜಿನ ಮೇಲೆಸೆದು “ಎಂಥ ಜನ ನೀವು!” ಎಂದರು. “ನನಗೆ ಅಂದು ಬರಲಿಕ್ಕೆ ಆಗಲಿಲ್ಲ” ಎಂದೆ. “ಅದು ನನಗೆ ಗೊತ್ತು–ಯಾಕೆ ಆಗಲಿಲ್ಲ ಹೇಳಿ!..ಅಯ್ಯೊ, ನಿಮ್ಮನ್ನು ಹಾಗೇ ಕೂರಿಸಿದೆನಲ್ಲಾ! ಸರಸ್ವತೀ, ಕಾಫಿ! ರುಕ್ಮಾ, ಹಣ್ಣು!” ಎಂದು ಕೂಗಿಕೊಂಡು ತಾವು ಹೋಗಿ ನನ್ನ ಕಾಗದಗಳನ್ನು ತಂದುಕೊಟ್ಟರು. ನಾನು ಅವುಗಳನ್ನು ಓದಲು ಆತುರನಾಗಿದ್ದೆನಾದರೂ ಅವರೊಡನೆ ಮಾತನಾಡಲು ಅದಕ್ಕೂ ಹೆಚ್ಚು ಆತುರನಾಗಿದ್ದೆ. “ಮೊದಲು ಕಾಫಿ ಕುಡಿಯಿರಿ, ಕಾಗದ ಆಮೇಲೆ ಓದಿದರಾಗದೇ? ಅಯ್ಯೊ ಇವರೆಲ್ಲಿ? ಮನೆಗೆ ಜನ ಬಂದಾಗ ಇವರಿರುವುದೇ ಇಲ್ಲ” ಎಂದು ಒಂದೆಡೆಗೆ ಓಡಿದರು. ಎರಡು ನಿಮಿಷಗಳಲ್ಲಿ

ಮತ್ತೆ '**ಹೋ**' ಎನ್ನುತ್ತ ತಮ್ಮ ಪತಿ **ಶ್ರೀ. ಗೋಪಾಲಕೃಷ್ಣರ** (ಗೋಪಾಲಯ್ಯ ಎನ್ನುವುದೂ ಉಂಟು.) ಕೈಹಿಡಿದುಕೊಂಡು ಬರುತ್ತಿರುವುದನ್ನು ಕಂಡೆ. ಎರಡೂ ಒಂದೆ ಬಗೆಯ ಬೆಳಕಿನ ಮುಖ, ಒಂದೇ ನಗೆ. ಎರಡು ದೇಹ, ಒಂದೇ ಗಾತ್ರ–ಗತಿ. ಇಬ್ಬರೂ ಸಮನಾಗಿ ಹೆಜ್ಜೆ ಹಾಕುತ್ತ ಬರುತ್ತಿದ್ದರು. ಅವರು ನಡೆದು ಬರುತ್ತಿದ್ದ ಆ ನೋಟ 'ಅವರಿನ್ನೂ ದೂರದಿಂದ ಬರುತ್ತಿರಬೇಕು; ಇಲ್ಲವೇ ನಾನು ಹಿಂದೆ ಸರಿಯುತ್ತಿರಬೇಕು. ಅವರು ಹಾಗೇ ಬರುತ್ತಲೇ ಇರಬೇಕು. ನಾನು ನೋಡುತ್ತಲೇ ಇರಬೇಕು!' ಎನ್ನಿಸಿತು. ಎಂತಹ ಜೊತೆ ಅದು! ಸರ್ವಜ್ಞಕವಿ ಇಂತಹ ಒಂದು ದಾಂಪತ್ಯ ನೋಡಿಯೆ 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎಂದಿರಬೇಕು.

ನಾವು ಅಲ್ಲಿ ಕೂಡಿ ಆಡಿದ ಮಾತಿಗೆ ತುದಿಮೊದಲಿರಲಿಲ್ಲ. ಸಾಮಾನ್ಯವಾಗಿ ಸಾಹಿತ್ಯದ ಮಾತುಗಳೇ ಹೆಚ್ಚು. ನಾನು, **ಪ್ರೊ. ಗೋಕಾಕ**ರು ಇಂಗ್ಲೆಂಡಿನಿಂದ ಬಂದ ಮೇಲೆ ಧಾರವಾಡಕ್ಕೆ ಮೊದಲು ಬಂದಾಗಿನ ನಮ್ಮ ಉತ್ಸಾಹವನ್ನು ಹೇಳಿದೆ. ಅದನ್ನು ಕೇಳಿ ಅವರು "ಇನ್ನಿಷ್ಟು ಹೇಳಿ–ಇನ್ನಿಷ್ಟು!" ಎಂದರು. **ಶ್ರೀ. ಬೇಂದ್ರೆ–ಮಾಸ್ತಿ** ಎಂದರೆ ಅವರಿಗೆ ಬಹಳ ಭಕ್ತಿ. ಅವರನ್ನೊಮ್ಮೆ ಕೂಡಿಯೆ ತಮ್ಮ ಮನೆಗೆ ಕರೆಯಬೇಕೆನ್ನುತ್ತಿದ್ದರು. ಬೇಂದ್ರೆಯವರ,—'**ರತ್ನ**'ರ ಕವಿತೆಗಳು, ಮಾಸ್ತಿಯವರ ಕತೆಗಳು ಆಗಿನ ನಮ್ಮ ಮಾತಿನಲ್ಲಿ ಹಾಸುಹೊಕ್ಕಾಗಿದ್ದವು. ಏನಾದರೂ ಮಾತು ಬಂದಾಗ ಅದರೊಡನೆ ಒಂದು ಕವಿತೆಯ ನುಡಿಯೊ, ಕತೆಯ ಒಂದು ಮಾತೊ ಬರುತ್ತಲೇ ಇತ್ತು. ಈ ಮೊದಲು ವರ್ಣಿಸಿದ ಹಾಲಿನಲ್ಲಿ ಒಂದು ಸಣ್ಣ ಮೇಜಿನ ಮೇಲೆ Golden Treasury, ಅದರೊಂದಿಗೆ '**ಶ್ರೀ**' ಅವರ '**ಇಂಗ್ಲೀಷು ಗೀತೆಗಳು**'; ಅಲ್ಲಿಯೇ '**ಉಮರನ ಒಸಗೆ**'. ಒಂದು ಬದಿಗೆ ಓದಿಓದಿ ಜೀರ್ಣವಾದ ಗರಿ–ಗರಿಯಾದ '**ಗರಿ**'ಯೊಂದು. Golden Treasuryಯ ಹೊಟ್ಟೆಯಲ್ಲಿ **ವಿ. ಸೀ.** ಅವರ '**ಮನೆತುಂಬಿಸುವುದು**' ಕವಿತೆಯದೊಂದು ಕಾಗದ ಇತ್ತು. ಇವುಗಳನ್ನಿಟ್ಟ ಚಿಕ್ಕ ಮೇಜಿಗೆ ಹೊದ್ದಿಸಿದ ಬಟ್ಟೆಯ ಮರೆಗೆ–ಬುಡದಲ್ಲಿ,

ಶ್ರೀ. ಗೋಪಾಲಯ್ಯನವರು ಓದುವ **ಪಂಪಭಾರತ, ಜೈಮಿನಿ ಭಾರತ** ಇರುತ್ತಿದ್ದುವು. ಇವರ ಒಬ್ಬ ಗೆಳತಿಯ ತಾಯಿ ಮಕ್ಕಳ '**ಕಾಟ**'ದಿಂದ ರೇಗಿದಾಗ '**ಯಾಕೋ ಕಾಣೆ**' ಎನ್ನುತ್ತಿದ್ದರಂತೆ. ಹಿಂದಿನಿಂದ ಗೌರಮ್ಮನವರು '**ರುದ್ರವೀಣೆ ಮಿಡಿಯುತಿರುವುದು**' ಎಂದು ಗೆಳತಿಯ ಕಿವಿಯಲ್ಲಿ ನುಡಿಯುತ್ತಿದ್ದರಂತೆ.

ಇವರಿಗೆ ಇಂಗ್ಲಿಷ್ ಕತೆಗಳನ್ನೋದುವುದು ಬಹಳ ಮೆಚ್ಚುಗೆ. ಒಮ್ಮೆ ಒಂದು ಕಾಗದದಲ್ಲಿ "ಮೊನ್ನೆಮೊನ್ನೆ 'Great Stories of the world' ಎಂಬ ಪುಸ್ತಕವನ್ನು ಓದಿದೆ. ಬಹಳ ಚೆನ್ನಾಗಿದ್ದ ಕತೆಗಳಿದ್ದುವು. ಓದಿ ಎನಿಸಿತು: 'ಅಯ್ಯೋ, ಈ ಕತೆಗಳ ಮುಂದೆ ನಮ್ಮ ಪ್ರಯತ್ನವೇ' ಎಂದು. ಮತ್ತೆ ಅವನ್ನು ಅನುವಾದಿಸಲೇ—ಎಂದುಕೊಂಡೆ. ಬೇಡ, ಇಷ್ಟೊಂದು ಸುಂದರವಾದವುಗಳನ್ನು ನನ್ನ ಬರೆಹದ ಮೂಲಕ ವಿರೂಪಗೊಳಿಸಬೇಕೇಕೆಂದು ಸುಮ್ಮನಾದೆ" ಎಂದು ಬರೆದಿದ್ದರು. ಅನುವಾದಗಳು ಚೆನ್ನಾಗಿರದಿದ್ದರೆ ಅವರಿಗೆ ತುಂಬ ಬೇಸರವಾಗುತ್ತಿತ್ತು. ಒಮ್ಮೆ ನಾನು ಕಳಿಸಿದ ಒಂದು ಅನುವಾದಿತ ಪುಸ್ತಕ ಓದಿ "ನಿನ್ನೆ ರಾತ್ರಿ '......' ಓದಿದೆ. ಚೆನ್ನಾಗಿಲ್ಲದ ಅನುವಾದಗಳನ್ನು ಓದುವುದಕ್ಕಿಂತಲೂ ಓದದಿದ್ದರೆ ಒಳ್ಳೆಯದೆನಿಸುವುದು. ಮುದ್ರಾರಾಕ್ಷಸಗಳು ತುಂಬಿಹೋಗಿವೆ. ಸಾಲದುದಕ್ಕೆ ಅನುವಾದವೂ ಅಷ್ಟು ಚೆಂದ.!" ಎಂದು ಬರೆದರು.

ಅಲ್ಲಲ್ಲಿಯ ಸಾಹಿತ್ಯದ ಚಟುವಟಿಕೆಗಳನ್ನವರು ಬಹಳ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. "ಒಕ್ಕಾರಿ ಸಮ್ಮೇಲನಕ್ಕೆ ಬನ್ನಿ" ಎಂದು ಬರೆದಿದ್ದೆ. ಅವರಿಗೆ ಬರಲಿಕ್ಕಾಗಲಿಲ್ಲ. ನಾನು ತಿರುಗಿ ಬಂದ ಕೂಡಲೆ ಉತ್ತರ ಬರೆಯಲಿಲ್ಲ. ಆಗ ಬಂದ ಗೌರಮ್ಮನವರ ಕಾಗದ ಹೀಗಿದೆ:

"ಸಾಹಿತ್ಯ ಸಮ್ಮೇಲನವಾಗಿ ಒಂದು ವಾರ ಕಳೆದರೂ ನಿಮ್ಮ ಪತ್ರವೇ ಇಲ್ಲ. ನನಗಂತೂ ನಿಮ್ಮ ಪತ್ರದ ಹಾದಿ ನೋಡಿನೋಡಿ ಕಣ್ಣುನೋವು ಬಂದುಹೋಗಿದೆ. ಸಾಹಿತ್ಯಸಮ್ಮೇಲನದ ವಿಷಯ ಪೇಪರ್‌ಗಳಲ್ಲಿ ಓದುವುದಕ್ಕಿಂತಲೂ ನಿಮ್ಮ ಪತ್ರದಲ್ಲಿ ಓದಿದರೆ ಹೆಚ್ಚು ಚೆಂದವೆಂದು ನನ್ನ ಭಾವನೆ. ಆದರೆ ನೀವು ಎಲ್ಲವನ್ನೂ—

ಒಂದೂ ಬಿಡದೆ–ನನ್ನ ಗೆಳತಿ ಕುಮಾರಿ ಪದ್ಮಾವತಿಯ ವಿಷಯ ಸಹ—ಬರೆಯಬೇಕೆಂದು ಆಸೆ ನನಗೆ. ಪತ್ರಿಕೆಗಳಲ್ಲಿ ಕೇವಲ **ಐ–ನ** ದ ಜಗಳಗಳಲ್ಲದೆ ಬೇರೇನೂ ಇಲ್ಲ. ಹೇಗೆ? ಬರೆಯುವಿರೋ ಇಲ್ಲವೊ?..”

ಗೌರಮ್ಮನವರಿಗೆ ಪ್ರಕೃತಿಸೌಂದರ್ಯನಿರೀಕ್ಷಣೆಯ ದೃಷ್ಟಿ ಚೆನ್ನಾಗಿತ್ತು. ನಾನಲ್ಲಿದ್ದಾಗ ದಿನಾಲು ತಿರುಗಾಡಲು ಹೋಗುತ್ತಿದ್ದೆವು–ಒಬ್ಬೊಬ್ಬರ ಇಷ್ಟದ ಸ್ಥಳಗಳಿಗೆ. ಮೊದಲದಿನ ಶ್ರೀ. ಗೋಪಾಲಕೃಷ್ಣರ ಸರತಿ ಅವರು ಕಾಫಿಯ ಕಾಡು ತೋಟದಲ್ಲಿ, ಕಡಿದಾದ ದಾರಿಯಲ್ಲಿ ಕರೆದೊಯ್ದರು. ಗಿಡಗಳಿಗೆ ಸುತ್ತಿಕೊಂಡ ಬಳ್ಳಿಗಳ ಕುಡಿಗಳು ನಮಗೂ ಸುತ್ತಿಕೊಳ್ಳುತ್ತಿದ್ದುವು. ನಾನು, ಗೌರಮ್ಮ, **ಶ್ರೀ. ಗೋವಿಂದಯ್ಯ** (ಗೌರಮ್ಮನವರ ನಚ್ಚಿನ ಮೈದುನ) ಗೋಪಾಲಕೃಷ್ಣರ ಹಿಂದಿಂದೆ ಮುಗ್ಗರಿಸುತ್ತ ನಡೆದೆವು. ಗೌರಮ್ಮನವರ ಸೀರೆಯ ಸೆರಗನ್ನು ಒಂದು ಮುಳ್ಳುಕಂಟಿ ಹಿಡಿಯಿತು. ಹುಸಿ ಸಿಟ್ಟು ತೋರಿ “ಎಂತ ದಾರಿ ನಿಮ್ಮದು? ಇನ್ನು ನೀವು ಕರೆದೊಯ್ಯುವುದಾದರೂ ಎಲ್ಲಿಗೆ? ನಮ್ಮನ್ನು ನಿಮ್ಮ ಕೂಲಿಗಳೆಂದು ತಿಳಿದಿರಾ?–” ಎನ್ನುತ್ತ ನಿಲ್ಲಲಾರದೆ ನಡೆದು ಬರುತ್ತಿದ್ದರು. ಅದೇ ಕಾಡಿನಲ್ಲಿ ದಿನಾಲು ತಿರುಗುತ್ತಿದ್ದ ಮ್ಯಾನೆಜರ್ ಗೋಪಾಲಕೃಷ್ಣರಿಗೇನು ತೊಂದರೆ? ಹಿಂತಿರುಗಿ, ತಮ್ಮ 'ಕೈಹಿಡಿದಾಕೆಯ' ಅವಸ್ಥೆ ನೋಡಿ ಕೈಕೊಟ್ಟು ಕರೆದುಕೊಂಡು ನಡೆದರು. ನಾವು ಒಂದು ಕಾಡುಹೊಳೆಗೆ ಬಂದೆವು. ದಾರಿಗೆ ಅಡ್ಡವಾಗಿ ಚಾಚಿ ಬಂದ ಗಿಡದ ಬೇರು ಹಿಡಿದು ನೇತಾಡಿದರು ಗೋವಿಂದಯ್ಯನವರು. ಅಂಥದೇ ಎರಡೂ ಬದಿಗೆ ಹಿಡಿದುಕೊಂಡ ಇನ್ನೊಂದು ಬೇರಿಗೆ ಜೀಕ ಮಾಡಿದರು ಗೌರಮ್ಮನವರು. ನಡು ನೀರಿನವರೆಗೆ ಚಾಚಿಕೊಂಡ ಒಂದು ಗಿಡ ಬಳಸಿ ಹೋಗಿ, ನಾನು–ಗೋಪಾಲಕೃಷ್ಣಯ್ಯ ನಿಂತಿದ್ದೆವು. ಅಲ್ಲಿ ನೀರು ಬಲು ಆಳವಾಗಿದೆಯಂತೆ. ಗೋವಿಂದಯ್ಯ ಒಳ್ಳೆಯ ಈಜುಗಾರರು. “ಹಾರಲೇ ಅಣ್ಣಯ್ಯ?” ಎಂದರು. 'ಹೂ' ಗುಟ್ಟಿದರು ಗೌರಮ್ಮ; 'ಮೊಸಳೆಗಳಿವೆ' ಎಂದರು ಗೋಪಾಲಯ್ಯ. ಸುಮ್ಮನೆ ನಿಂತಿದ್ದೆ ನಾನು–

ಮುಂಗಲಿನ ವರೆಗೆ ಹಬ್ಬಿ ನಿಂತ ಬೆಟ್ಟವನ್ನೂ ಅದರಲ್ಲೆಲ್ಲ ನೆಟ್ಟು ನಿಂತ ಗಿಡಗಳನ್ನೂ ನೋಡುತ್ತ. "ನೋಡಿ, ಎಂತಹ ರಮಣೀಯ ದೃಶ್ಯ!" ಎಂದರು ಗೋಪಾಲಯ್ಯ. "ನಮಗೆ ನಿಮ್ಮ ಕಣ್ಣಿಲ್ಲ" ಎಂದರು ಗೌರಮ್ಮ. "ಮತ್ತೆ ನಿಮ್ಮ ಸ್ಥಳವಾವುದು?" ನಾನೆಂದೆ. "ನನ್ನದೂ ಬಹಳ ಸುಂದರ ವಾಗಿದೆ. ನಾವಿಬ್ಬರೇ ಹೋಗೋಣ. ಈ ಜನದ ದೃಷ್ಟಿ ತಾಕೀತು ನನ್ನ ಆ ಸ್ಥಳಕ್ಕೆ" ಎಂದರವರು.

ಅದರಂತೆಯೇ ಮರುದಿನ ನಾವಿಬ್ಬರೇ ಹೊರಟೆವು. ಅದೂ ಕಾಡಾದರೂ ದಾರಿಯಿತ್ತು. ಸ್ವಲ್ಪ ದಿಬ್ಬ ಹತ್ತಿದ ಮೇಲೆ, ಕೆಳಗೆ ದೂರದ ವರೆಗೆ ಬಯಲು ಹಬ್ಬಿದೆ. ಅಲ್ಲೊಂದು ಹೊಳೆ, ಥಳಥಳ ಹೊಳೆಯುತ್ತ ಸಾಗಿದೆ. ನಾನು ಹೋದ ಸಮಯದಲ್ಲಿ ಬಂಜೆಭೂಮಿ; ಬೆಳೆಗಾಲದಲ್ಲಾದರೆ ಬಯಲೆಲ್ಲ 'ಹಸಿರು ಹಾಸಿ'ನಂತಿರುತ್ತದಂತೆ. ಅಲ್ಲಿಯೇ ಒಂದು ಕೃತ್ರಿಮ ಆಸನ ಸಿದ್ಧಪಡಿಸಿದ್ದಾರೆ ಗೌರಮ್ಮನವರು. . ತಾವೊಬ್ಬರೇ ಬಂದು ಹಾಗೆಯೆ ನೋಡುತ್ತ ಕೂಡುವುದಕ್ಕೆಂದು. ಮಳೆಗಾಲದಲ್ಲಿ ಮಳೆಯ ಪರಿವೆಯಿಲ್ಲದೆ ಅಲ್ಲಿ ನೋಡುತ್ತ ಕುಳಿತಿರುತ್ತಿದ್ದರಂತೆ ಗೌರಮ್ಮ. ಅಲ್ಲಿಂದ ಇಳಿಯುತ್ತ ಇಳಿಯುತ್ತ ನದಿಯ ದಾರಿಗೆ ಬಂದೆವು. ಒಂದು ಲಾರಿ—ಇವರದೇ—ಕಾಫಿ ಬೀಜ ತರುವಂತಹದು—ಬರುತ್ತಿತ್ತು. 'ಅವರಿದ್ದಾರೆಯೇ ನೋಡಿ' ಎಂದರು. 'ಮುಂದೆಯೇ ಇದ್ದಾರಲ್ಲ! ಕಾಣುವದಿಲ್ಲವೇ ನಿಮಗೆ?' ಎಂದೆ. ಅವರು ಬಿದ್ದು ಬಿದ್ದು ನಗಹತ್ತಿದರು. ನಾನು ಪೆಚ್ಚು ಬಿದ್ದು ಕೇಳಿದೆ: 'ಏನದು?' ಎಂದು. ಅವರು ಹೇಳಿದರು: "ನೋಡಿ, ನಾನು ಮೊನ್ನೆ ಮಡಿಕೇರಿಗೆ ಹೋದಾಗ ದಾರಿಯ ಒಂದು ಬದಿಯಿಂದ ಹೋಗುತ್ತಿದ್ದೆ. ನನ್ನ ಹಿರಿಯಣ್ಣ ಅದೇ ದಾರಿಯಿಂದ ಎದುರಾಗಿ ಬರುತ್ತಿದ್ದ. ನನಗೆ ಕಾಣಲಿಲ್ಲ. 'ಏನು ಗೌರಮ್ಮ, ಯಾವಾಗ ಬಂದೆ? ಹಾಗೇ ಹೊರಟಿದ್ದೀಯಲ್ಲ!' ಎಂದು ಆರಂಭಿಸಿದ. ನನಗೆ ಬಹಳ ನಾಚಿಕೆಯಾಯಿತು. ಈಗ ಬೇಗನೆ ಕಣ್ಣಿನ ಚಿಕಿತ್ಸೆ ಮಾಡಿಸುವುದೆಂದು ನಿರ್ಧರಿಸಿದ್ದೇನೆ. ತಾರೀಖು ಗೊತ್ತಾಗಿದೆ. ನನ್ನಣ್ಣನೊಡನೆ ಬೆಂಗಳೂರಿಗೆ ಹೋಗಲಿರುವೆ. 'ನಾಲ್ಕು ಕಣ್ಣು' ಆಗದಂತೆ ಕಳೆಗೊಳಿಸಲು ಕೇಳಿಕೊಂಡಿದ್ದೇನೆ ಡಾಕ್ಟರನ್ನು—ನೋಡಬೇಕು" ಎಂದರು.

"ಹಾಗಾದರೆ ನೀವೇ ಹಾಕಿಸಿದ ಆ ಆಸನದ ಮೇಲೆ ಕುಳಿತು ನೀವು ನೋಡುತ್ತಿರುವುದೇನು?" ಎಂದು ಕೇಳಿದೆ. "ದೃಷ್ಟಿ ದೂರ ಹರಿಯಲೆಂದೇ ಅದನ್ನು ಹಾಕಿಸಿರುವೆ. ನನ್ನ ಕಣ್ಣಿನ ಅವಸ್ಥೆ ಇನ್ನೂ ಬಹಳ ಜನಕ್ಕೆ ಗೊತ್ತಾಗಿಲ್ಲ. ಚಿಕ್ಕ ಚಿಕ್ಕ ಅಕ್ಷರ ಓದಿ ನನ್ನ ಪಾಡು ಹೀಗಾಗಿದೆ!" ಎಂದರು. ಅಲ್ಲಿಂದ ಹೊಳೆಯ ತೀರಕ್ಕೆ ಬಂದೆವು. ಬಂದು ಸೀಳು ದಾರಿಯಿಂದ ಮುಂದೆ ಸಾಗಿದೆವು. ನಾವು ಹಿಂದಿನ ದಿನ ತಿರುಗಾಡಲು ಹೋದ ಹೊಳೆಗೆ ಮತ್ತೊಂದು ಬದಿಯ ಬೆಟ್ಟದಿಂದ ಇನ್ನೊಂದು ಹೊಳೆ ಹರಿದು ಬಂದು ಕೂಡಿದೆ. ಆ ದೃಶ್ಯ ಬಹಳ ರಮಣೀಯವಾಗಿದೆ. ನಾವು ಸುತ್ತಲೂ ನೀರಿದ್ದ ಒಂದು ಕಲ್ಲುದಿಬ್ಬಕ್ಕೆ ಬಂದೆವು. ಅಲ್ಲಿ ಕುಳಿತು ಹಿಂದೆ ತಿರುಗಿ ನೋಡಿದರೆ—ಆ ಕೂಡುಹೊಳೆಯು ಹರಿದು ಬರುವುದು; ಅದರ ಹಿಂದೆ ಎರಡೂ ಬದಿಯಿಂದ ಬೆಟ್ಟ ಹಬ್ಬಿ ಒಂದೆಡೆಗೆ ಕೂಡಿರುವುದು. ಬೆಟ್ಟದ ಮೇಲಿನ ಮರಗಳು ಮುಗಿಲನ್ನು ಚುಚ್ಚುವ ಸೊಕ್ಕಿನಲ್ಲಿ ಬೆಳೆದಿವೆ. ನಾವು ಕೂತಲ್ಲಿಂದ ಮುಂದೆ ಸ್ವಲ್ಪ ಮರಳು. ಅಲ್ಲಿಂದ ದಾಟಿ ನೀರಿನಲ್ಲಿ ಬುಟ್ಟಿಯಂತೆ ಬೆಳೆದು ನಿಂತ ಒಂದು ಹುಲ್ಲುಗಡ್ಡೆ—ಕತ್ತರಿಸಿ ಬೆಳಸಿದಂತೆ—ಬೆಳೆದು ನಿಂತಿದೆ. ಬಹಳ ದಿವಸಗಳಿಂದಲೂ ಅದು ಹಾಗೆಯೇ ಇದೆಯಂತೆ. ಆ ಸ್ಥಳ ನಿಜವಾಗಿಯೂ ಸುಂದರವಾಗಿದೆ. 'ನೋಡಿ ಕುಲಕರ್ಣಿಯವರೇ, ನನ್ನ ಸ್ಥಳ! ಬೇಂದ್ರೆಯವರನ್ನು ಇಲ್ಲಿಗೆ ಕರೆದುತಂದು ಕೂರಿಸಿದರೆ ಎಂತಹ ಕವಿತೆ ಹುಟ್ಟಬಹುದು?' ಎಂದು ಕೇಳಿದರು. ಬೇಂದ್ರೆಯವರೆಂದರೆ ಅಷ್ಟು ಇಷ್ಟ ಅವರಿಗೆ. ಒಬ್ಬ ಲೇಖಕರಿಗೆ ಇವರು ಬೇಂದ್ರೆಯವರ ವಿಷಯವನ್ನು ಹೇಳುತ್ತಿದ್ದಾಗ ಅವರು 'ಬೇಂದ್ರೆ ಎಂದರೆ ಯಾರು?' ಎಂದರಂತೆ; ಆದಕ್ಕಿವರು ಹೀಗೆ ಹೇಳಿದರಂತೆ:

"ನಮಗವರ ಮಾತನ್ನು ಕೇಳಿ ಆಶ್ಚರ್ಯವಾಯಿತೆಂದರೆ—ಆಶ್ಚರ್ಯವೇನು ಹೇಳಿ! 'ಬೇಂದ್ರೆ ಎಂದರೆ ಯಾರು?' ಕನ್ನಡದಲ್ಲಿ ನೂರಾರು ಕತೆಗಳನ್ನು ಬರೆದು ಹೆಸರುಹೊಂದಿದ ಇವರಿಗೆ ಬೇಂದ್ರೆ ಎಂದರೆ ಯಾರು ಎಂದು ಗೊತ್ತಿಲ್ಲವಂತೆ! ಉಕ್ಕುತ್ತಿದ್ದ ನಗುವನ್ನು ತಡೆದುಕೊಂಡು ಹೇಳಿದೆ:—'ಅಂಬಿಕಾತನಯದತ್ತರು

ಗೊತ್ತಿಲ್ಲವೇ ನಿಮಗೆ? ಕನ್ನಡ ನಾಡಿನ ಶೇಕ್ಸ್‌ಪಿಯರ್ ಅವರು. ಕೇವಲ ಕನ್ನಡ ನಾಡಿನಲ್ಲಿ ಏಕೆ? ರವೀಂದ್ರರಿಗೆ ದೇಶಬಂಧುಗಳು ದೊರೆತಂತೆ ಅಂಬಿಕಾತನಯರ ಕವಿತೆಗಳನ್ನು ಇಂಗ್ಲಿಷಿಗೆ ತರ್ಜುಮೆ ಮಾಡಬಲ್ಲವರು ಯಾರಾದರೂ ಇದ್ದಿದ್ದರೆ, ಇಂದು ಬೇಂದ್ರೆಯವರ ಹೆಸರು ವಿಶ್ವಸಾಹಿತ್ಯದಲ್ಲಿ ಮೆರೆಯುತ್ತಿತ್ತು. ಅವರ ಕವಿತೆಗಳನ್ನು ಓದಿಲ್ಲವೇ ನೀವು?—' ಇನ್ನೂ ಬಹಳ ಮಾತುಗಳು ಉಕ್ಕಿಬಂದುವು." ಎಂದು ಬರೆದಿದ್ದಾರೆ.

ಗೌರಮ್ಮನವರಿಗೆ ಪ್ರಾಣಿದಯೆ ತುಂಬ ಇತ್ತು. ಮನೆಯಲ್ಲಿ ನಾಯಿ, ಬೆಕ್ಕು, ಹಸು, ದನ ಎಲ್ಲ ಇದ್ದುವು. ನಾಯಿಗೆ ಇವರು 'ಫ್ರೆಡ್ಡಿ' 'ಗ್ರೇಟಾ' ಎಂದು ಕರೆಯುತ್ತಿದ್ದರು. 'ನಾಯಿಗೆ ಇಂಗ್ಲಿಷ್ ಹೆಸರೇಕೆ?' ಎಂದು ನಾನು ಕೇಳಿದ್ದಕ್ಕೆ 'ಇಂಗ್ಲಿಷು ಹೆಸರು ನಾಯಿಗೂ ಒಪ್ಪುವುದಿಲ್ಲವೋ?' ಎಂದು ಅವರು ಕೇಳಿದರು.

ಗೌರಮ್ಮನವರ ಪತಿಭಕ್ತಿ ಅಪಾರವಾಗಿತ್ತು. ದುಡಿದು ಬಂದ ಗಂಡನ ಸ್ವಾಗತಕ್ಕಾಗಿ ಬಾಗಿಲಲ್ಲಿ ನಿಂತ ಗೌರಮ್ಮ, ಗಂಡಬರುತ್ತಲೆ 'ಹಲ್ಲೋ' ಎಂದು ಕೈಹಿಡಿದು ಕರೆದುಕೊಂಡು ಬಂದು ಕುರ್ಚಿಯಲ್ಲಿ ಕೂರಿಸಿ, ಬೂಟು-ಕಾಲುಚೀಲ ಬಿಚ್ಚುತ್ತಿದ್ದರು. ಒಳಗಿನಿಂದ ತಾವೇ ಕಾಫಿ ತಂದುಕೊಡುತ್ತಿದ್ದರು. ಎಂತಹ ಆಯಾಸವಾಗಿದ್ದರೂ ಗೋಪಾಲಯ್ಯನವರಿಗೆ ಆಗ ಹಗುರೆನಿಸುತ್ತಿರಬಹುದು. 'ಇವರಿಗೆ ತುಂಬ ಕೆಲಸ, ನಾನಿವರಿಗೇನೂ ಸಹಾಯಮಾಡಲಾರೆನಲ್ಲಾ!' ಎನ್ನುತ್ತಿದ್ದರು. ಒಂದು ದಿನ ಊಟವಾದ ಮೇಲೆ ನಾವು ಮೂವರೂ ಮಾತನಾಡುತ್ತ ಕುಳಿತಿದ್ದೆವು; ಆಯಾಸವಾಗಿತ್ತೆಂದು ಕಾಣುತ್ತದೆ—ಗೋಪಾಲಯ್ಯನವರು ಕುರ್ಚಿಯಲ್ಲಿಯೇ ನಿದ್ದೆಹೋದರು. ಅದನ್ನು ಕಂಡ ಗೌರಮ್ಮನವರು ನನ್ನನ್ನು ಸನ್ನೆಯಿಂದ ಸುಮ್ಮನಿರಿಸಿ, ಎರಡು ಮೆತ್ತೆ ತಂದು ತಲೆಯ ಬುಡದಲ್ಲೊಂದನ್ನು ಮೆಲ್ಲಗಿರಿಸಿದರು. ಇನ್ನೊಂದನ್ನು ಕಾಲಬುಡದಲ್ಲಿ ಸರಿಸಿ, ನನ್ನನ್ನು ಒಳಗೆ ಕರೆದು ನಮ್ಮ ಮಾತು ಅವರಿಗೆ ಕೇಳಿಸಿ ಎಚ್ಚರಾಗದಂತೆ ಕನ್ನಡಿಯ ಬಾಗಿಲನ್ನು ಎಳೆದರು. ಅದರಂತೆಯೆ

ಶ್ರೀ. ಗೋಪಾಲಯ್ಯನವರೂ ಗೌರಮ್ಮನವರನ್ನು ತುಂಬ ಪ್ರೀತಿಸುತ್ತಿದ್ದರು. ಗೋಪಾಲಯ್ಯನವರು ಬರೆದ ಒಂದು ಕಾಗದದಲ್ಲಿ ಹೀಗಿದೆ: 'ನೀವು ನನ್ನ ಗೌರಮ್ಮನಿಗೆ ಬರೆದ ಕಾಗದ ನೋಡಿದೆ. ಅದರಲ್ಲಿ ಮಾಸ್ತಿಯವರು ಮತ್ತೆ ಬೇಂದ್ರೆಯವರೂ ಸಹ, ರಾಮ-ಲಕ್ಷ್ಮಣರಂತೆ ನಮ್ಮ ದಂಡಕಾರಣ್ಯಕ್ಕೆ ಬರುವವರಾಗಿ ತಿಳಿದೆ. ನನ್ನ ಗೌರಮ್ಮ—ಶಬರಿಗಂತೂ ಹಿಗ್ಗೇಹಿಗ್ಗು. ನೀವು ಪ್ರಕಟಿಸುವ 'ಚಿಗುರಿ'ಗಿಂತಲೂ ಚಿಗುರಿಬಿಟ್ಟಿದ್ದಾಳೆ.

ಗೌರಮ್ಮನವರಲ್ಲಿ ದೇಶಭಕ್ತಿಯೂ ಉಜ್ವಲವಾಗಿತ್ತು. ಹತ್ತು ಹನ್ನೆರಡು ವರುಷಗಳಿಂದ ಸಂಪೂರ್ಣವಾಗಿ ಖಾದಿ ಧರಿಸುತ್ತಿದ್ದರು. ಖಾದಿಯನ್ನು ಉಡು-ತೊಡುವವರನ್ನು ಕಂಡರೆ ಅವರಿಗೆ ತುಂಬ ಸಂತೋಷ. **ಮಹಾತ್ಮಾ ಗಾಂಧಿ**ಯವರೊಮ್ಮೆ ಕೊಡಗಿಗೆ ಬಂದಾಗ, ಶ್ರೀ. ಮಂಜುನಾಥಯ್ಯನವರಲ್ಲಿ ಬಂದರಂತೆ. ಆಗ ಗೌರಮ್ಮನವರು ತಮ್ಮ ಮನೆಗೂ ಮಹಾತ್ಮರನ್ನು ಕರೆದರಂತೆ. ಸಮಯವಿಲ್ಲದ್ದರಿಂದ ಅವರು ಹೋಗಲು ಅಷ್ಟು ಆತುರಪಡಲಿಲ್ಲವಂತೆ. ಗೌರಮ್ಮನವರು '**ಫಾಸ್ಟ**' ಆರಂಭಿಸುವೆನೆಂದು ಹೇಳಿ ಕಳಿಸಿದರು; ಹೆದರಿ ಬಂದ **ಮುದುಕ.** ಗೌರಮ್ಮ ತಮ್ಮ ಮೈಮೇಲಿನ ಎಲ್ಲ ಆಭರಣ ಬಿಚ್ಚಿ ಕೊಟ್ಟುಬಿಟ್ಟರಂತೆ. ಮಹಾತ್ಮರು ಗೋಪಾಲಯ್ಯನವರನ್ನು ಕರೆದು 'ನಿಮ್ಮ ಆಕ್ಷೇಪಣೆ ಇಲ್ಲವಷ್ಟೇ?' ಎಂದರಂತೆ. 'ಅವಳಿನ್ನು ಆಭರಣ ಬೇಡದಿದ್ದರಾಯಿತು!' ಎಂದು ನಕ್ಕು ನುಡಿದರಂತೆ ಗೋಪಾಲಯ್ಯ. ಆಗ "**ಹರಿಜನ**" ದಲ್ಲಿ ಮಹಾತ್ಮರು ಈ ವಿಷಯದಲ್ಲಿ ಒಂದು ಲೇಖನ ಬರೆದರಂತೆ. ನನಗಿದನ್ನು ಮಡಿಕೇರಿಯಲ್ಲಿ ಒಬ್ಬ ಸ್ನೇಹಿತರು ಹೇಳಿದರು. ನಾನು ಬಂದು 'ಈ ವಿಷಯ ನೀವು ನನಗೆ ತಿಳಿಸಲಿಲ್ಲವಲ್ಲ!' ಎಂದೆ. 'ಇಲ್ಲಿಯ ಬಹಳ ಜನರಿಗೆ ಈ ವಿಷಯ ಗೊತ್ತಿಲ್ಲ. ಹೇಳಿ ಹೇಳುವುದಿಲ್ಲವೆಂದು ನಾನೀ ವಿಷಯವನ್ನು ಎತ್ತುವುದಿಲ್ಲ' ಎಂದು ಹೇಳಿದರು. 'ಕೊಡಗು ಬ್ರಿಟಿಶ್ ಕನ್ನಡನಾಡಿನೊಡನೆ ಒಂದಾಗದೆ ಗತಿಯಿಲ್ಲ!' ಎಂದು ಇವರು ಅಲ್ಲಿಯ ಏಕೀಕರಣ ಪಕ್ಷದ ಮುಖಂಡರಾಗಿ ಕೆಲಸ ಮಾಡುತ್ತಿದ್ದರು.

ಇವರ ತಂದೆಗೆ ಇವರ ಬರೆಹಗಳ ಮೇಲೆ ತುಂಬ ಪ್ರೀತಿ ಇತ್ತು. ಮೊನ್ನೆ ಮೊನ್ನೆ ಅವರು ತೀರಿದಾಗ ಗೌರಮ್ಮನವರು ವ್ಯಸನಪಟ್ಟು ಹೀಗೆ ಬರೆದರು:

"ನಿಮ್ಮ ಕಾಗದ, ಅದರೊಡನೆಯೇ ಇನ್ನೊಂದು ಟೆಲಿಗ್ರ್ಯಾಮ್. ನಿಮ್ಮ ಕಾಗದ ಒಡೆಯುವ ಮೊದಲೇ ಅದನ್ನೊಡೆದು ಓದಿದೆ. ನನ್ನ ತಂದೆ—ತಾಯಿಯಿಲ್ಲದ ನನ್ನನ್ನು ತಾಯಿ ತಂದೆಗಳ ಭಾರ ವನ್ನು ಹೊತ್ತು ಸಾಕಿದ ನನ್ನ ತಂದೆ—ಇನ್ನಿಲ್ಲವೆಂದು ಓದಿದೆ. ಅವರನ್ನು ನೋಡದೆ ಎರಡು ತಿಂಗಳಾಗಿತ್ತು. ಏನೋ ಒಂದು ದಿನ ಸ್ವಲ್ಪ ಜ್ವರವಿತ್ತಂತೆ. ಅಷ್ಟರ ಸಲುವಾಗಿ ಕಾಗದವೇಕೆ? ಎಂದು ನನಗೆ ಬರೆದಿರಲಿಲ್ಲ. ಮರುದಿನ ಸ್ನಾನ ಮಾಡಿ ಆಯಾಸವೆಂದು ಮಲಗಿದರಂತೆ. ಹತ್ತೇ ನಿಮಿಷಗಳೊಳಗಾಗಿ ಆಯಾಸ—ನರಳು ವಿಕೆ ಇಲ್ಲದೆಡೆಗೆ ಹೋಗಿ ಬಿಟ್ಟರವರು. ಆ ದಿನದಿಂದ ಈಚೆಗಿನ ಕಾಲವೆಲ್ಲ ನನ್ನ ಜೀವನದ ಅತ್ಯಂತ ದುಃಖದ ದಿನಗಳಾಗಿವೆ. ನೀವು ಪ್ರಸಿದ್ಧಿಸುವ ನನ್ನ ಪುಸ್ತಕ ನೋಡಲಿಲ್ಲ ಅವರು"

ಈ ಸಂಗ್ರಹಕ್ಕೆ ಮೊದಲು '**ಚಿಗುರು**' ಎಂದು ಹೆಸರಿಟ್ಟಿತ್ತು. ಮೊನ್ನೆ ಮೊನ್ನೆ ಗೌರಮ್ಮನವರು ಅದನ್ನು '**ಕಂಬನಿ**' ಎಂದು ಮಾರ್ಪ ಡಿಸಿ ತಾವೂ ಪುಸ್ತಕ ನೋಡದೆ, ಕನ್ನಡಿಗರೆಲ್ಲ ಕಂಬನಿಗರೆಯುವಂತೆ ಮಾಡಿ ನಮ್ಮನ್ನಗಲಿ ಹೋದರು.

ಇವರ ಕತೆಗಳಿಂದ ಚಿಗುರಿದ ಹೆಣ್ಣುಮಕ್ಕಳ ಸಾಹಿತ್ಯ, ಕನ್ನಡ ಸಾಹಿತ್ಯದಲ್ಲಿ ಮಂಗಲಪ್ರದವಾಗಿ ಬೆಳೆಯುತ್ತಿರುವ ಈ ಕಾಲದಲ್ಲಿ, ಇವರ ಮರಣದಿಂದ ಕನ್ನಡ ನಾಡೇ ಮರುಗುವಂತಾಯಿತು. ಗೌರಮ್ಮನವರ ಆರು ವರ್ಷದ ಎಳೆಯ ಮಗು **ವಸಂತ** (ಬೇಬಿ) ಚಿಗುರುವ ತನ್ನ ಆಯುಷ್ಯದಲ್ಲಿ, ಇಂತಹ ಎಳೆಯತನದಲ್ಲಿ—ತನ್ನ ತಾಯಿಯಂತೆ—ಪರದೇಶಿ ತನವನ್ನು ಭೋಗಿಸಬೇಕಾಗಿ ಬಂತು. ಇವರ ಪತಿಗೆ ಒಮ್ಮೆಲೆ ಘಟಿಸಿದ ಸಹಿಸಲಾರದ ಈ ಒಂಟಿಗತನದ ದುಃಖದಲ್ಲಿ....!

ಇಷ್ಟೆಲ್ಲ ಆಟವಾಡಿದ ಗೌರಮ್ಮನವರು ಇನ್ನಿಲ್ಲ. 'ಓ' ಕೊಡದ ನಾಡಿಗೆ ನಡೆದುಬಿಟ್ಟರವರು. ಈ ಎಲ್ಲ ಸವಿ ನೆನಪುಗಳು ಹಿಂದೆ ಒಂದು ಕರಾಳಸತ್ಯವು ತಾಂಡವವಾಡಿ ಅವರ ಬಳಗವನ್ನೂ-ಕನ್ನಡ ನಾಡನ್ನೂ ಅಪಾರ ಶೋಕಕ್ಕೀಡುಮಾಡಿದೆ. ನುಗ್ಗಿ ಬರುವ ಇಂತಹ ನೆನಪುಗಳೊಡನೆ 'ಇನ್ನು ಅವರಿಲ್ಲವಲ್ಲಾ' ಎಂಬ ನೆನಪು ದುಃಖವನ್ನು ಸೂರ್ಸೂಡಿಸುತ್ತದೆ. ಅವರಿಲ್ಲವೆಂಬ ದುಃಖ, ಈ ನೆನಪುಗಳಲ್ಲಿ ಒಂದು ನಿಮಿಷವಾದರೂ ಮರೆತರೆ ಅದೇ ರಸನಿಮಿಷ! ಇಂಥ ಪವಿತ್ರ ಆತ್ಮಗಳೂ ಇಲ್ಲದಾಗುತ್ತಿರಬಹುದೇ?

ಧಾರವಾಡ
೨೦-೪-೧೯೩೯ } ದತ್ತಾತ್ರೇಯ ಕುಲಕರ್ಣಿ

● ● ಶ್ರೀಮತಿ ಗೌರಮ್ಮನವರು ಕ್ರಿ. ಶ. ೧೯೧೨ರಲ್ಲಿ ಕೊಡಗಿನ ಮಡಿಕೇರಿಯಲ್ಲಿ ಹುಟ್ಟಿದರು. ಇವರ ತಂದೆ ಶ್ರೀ. ಎನ್. ಎಸ್. ರಾಮಯ್ಯನವರು ಮಡಿಕೇರಿಯಲ್ಲಿ ವಕೀಲರಾಗಿದ್ದರು. ಶ್ರೀಮತಿಯವರು ಅವರ ಕನಿಷ್ಠ ಪುತ್ರಿ. ಕ್ರಿ. ಶ. ೧೯೨೯ರಲ್ಲಿ ಶುಂಠಿಕೊಪ್ಪದ ಶ್ರೀ. ಬಿ. ಟಿ. ಗೋಪಾಲಕೃಷ್ಣಯ್ಯನವರೊಡನೆ ವಿವಾಹವಾಯಿತು. ಕ್ರಿ. ಶ. ೧೯೩೧ರಲ್ಲಿ ಇವರಿಗೆ ಗಂಡು ಸಂತಾನವಾಯಿತು. ಅದೇ ಮಗು ವಸಂತಕುಮಾರ (ಜೇಪಿ). ಚಿಕ್ಕಂದಿನಲ್ಲಿ ಮಡಿಕೇರಿ ಕಾನ್ವೆಂಟಿನಲ್ಲಿಯೂ ಮದುವೆಯಾದ ಮೇಲೆ ಮಡಿಕೇರಿ ಹಾಯಸ್ಕೂಲಿನಲ್ಲಿಯೂ V form ನ ವರೆಗೆ ವಿದ್ಯಾಭ್ಯಾಸವಾಗಿತ್ತು. ಕ್ರಿ. ಶ. ೧೯೩೮ರಲ್ಲಿ ಹಿಂದೀ ಅಭ್ಯಾಸಮಾಡಿ 'ವಿಶಾರದ' ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದ್ದರು.

ತಾ ೧೩–೪–೧೯೩೯ನೆಯ ದಿವಸ ತಮ್ಮ ಮನೆಯ ಬಳಿಯ ಹರದೂರ ಹೊಳೆಯಲ್ಲಿ ಈಸು ಕಲಿಯುತ್ತಿರುವಾಗ ಕೈಸೋತು ಮುಳುಗಿ ಮೃತರಾದರು. ● ●

## ಅರಿಕೆ

ಈ ಕಥಾಸಂಗ್ರಹದ ಯೋಜನೆಯು ಶ್ರೀಮತಿ ಗೌರಮ್ಮನವರು ಇರುವಾಗಲೆ ಆಗಿತ್ತು. ಮುನ್ನುಡಿಗಾಗಿ ಹಾಗೂ ಉಳಿದ ಎರಡು ಮಾತುಗಳಿಗಾಗಿ ಅಂದು ಗೌರಮ್ಮನವರೇ ಬರೆದುಕೊಟ್ಟ 'ಮೂರು ಮಾತು' ಗಳನ್ನು ಬೇರೆಯಾಗಿ ಪ್ರಕಟಿಸಿದ್ದೇವೆ.

ಶ್ರೀಮತಿ ಗೌರಮ್ಮನವರ ಅಪೇಕ್ಷೆಯಂತೆ ನಮ್ಮ ಬಿನ್ನಹವನ್ನು ಮನ್ನಿಸಿ ಶ್ರೀ. ಬೇಂದ್ರೆಯವರು ಮುನ್ನುಡಿಯನ್ನು ಬರೆದು ಕೊಟ್ಟಿದ್ದಾರೆ. ಅದರೊಂದಿಗೆ 'ತಂಗಿ ಗೌರಮ್ಮ' ಎಂಬ ಕವನವನ್ನೂ ದಯಪಾಲಿಸಿದ್ದಾರೆ. ಇವುಗಳಿಗಾಗಿ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ನಮ್ಮ ಮಿತ್ರರೂ ದಿವಂಗತ ಸೌ॥ ಗೌರಮ್ಮನವರ ಪತಿಗಳೂ ಆದ ಶ್ರೀಮಾನ್ ಬಿ. ಟಿ. ಗೋಪಾಲಕೃಷ್ಣರಾಯರು ಈ ಪುಸ್ತಕ ಪ್ರಕಾಶನಕ್ಕೆ ತಮ್ಮ ಸ್ನೇಹದ ಬೆಂಬಲವನ್ನೂ ಕತೆ, ಚಿತ್ರ ಮೊದಲಾದ ಅನುಕೂಲತೆಗಳನ್ನೂ ಒದಗಿಸಿ ಕೊಟ್ಟಿದ್ದಾರೆ. ಅದಕ್ಕಾಗಿ ಅವರನ್ನು ಹೃತ್ಪೂರ್ವಕವಾಗಿ ನಾವು ಅಭಿವಂದಿಸುತ್ತೇವೆ.

**ಪ್ರಕಾಶಕರು**

# ಮೂರು ಮಾತುಗಳು

ಈ ಸಂಗ್ರಹದಲ್ಲಿಯ ಕೆಲವು ಕತೆಗಳು ಈ ಮೊದಲು 'ಜಯ ಕರ್ನಾಟಕ' 'ರಾಷ್ಟ್ರಬಂಧು' 'ಜಯಂತಿ' ಈ ಪತ್ರಿಕೆಗಳಲ್ಲಿಯೂ ಮೂರು ಕತೆಗಳು 'ಮಧುವನ' 'ಕೆಲವು ನೀಳ್ಗತೆಗಳು' ಮತ್ತು 'ರಂಗವಲ್ಲಿ' ಎಂಬ ಕಥಾಸಂಗ್ರಹಗಳಲ್ಲಿಯೂ ಪ್ರಕಟವಾಗಿವೆ. ಮೇಲಿನ ಎಲ್ಲ ಸಂಪಾದಕರಿಗೂ ನಾನು ವಂದನೆಗಳನ್ನು ಅರ್ಪಿಸುತ್ತೇನೆ.

ನನ್ನ 'ಸುಳ್ಳುಸ್ವಪ್ನ' ವೆಂದು ಮೊದಲು ಪ್ರಕಟವಾದ ಕತೆಯನ್ನು ಒಬ್ಬ ಮಹನೀಯರು 'ಪ್ರಜಾಮತದ' ೪–೧೨–೩೮ ರ ಸಂಚಿಕೆಯಲ್ಲೂ 'ಸನ್ಯಾಸಿರತ್ನ' ಎಂಬ ಕತೆಯನ್ನು ಇನ್ನೊಬ್ಬ ಮಹಾನುಭಾವರು 'ರಾಷ್ಟ್ರಬಂಧು'ವಿನ ೧೭–೫–೩೭ರ ಸಂಚಿಕೆಯಲ್ಲೂ ಎತ್ತಿ ತಮ್ಮದಾಗಿ ಪ್ರಕಟಿಸಿದ್ದಾರೆ. ಇದಕ್ಕಾಗಿ ನಾನು ತುಂಬ ವಿಷಾದಿಸುತ್ತೇನೆ.

ಈ ಸಂಗ್ರಹಕ್ಕೆ ಒಂದು ಅಪೂರ್ವವಾದ ಮುನ್ನುಡಿಯನ್ನು ಬರೆದುಕೊಟ್ಟುದಕ್ಕಾಗಿ ಸನ್ಮಾನ್ಯರಾದ ಶ್ರೀ. ಬೇಂದ್ರೆಯವರಿಗೆ ನಾನು ಚಿರಋಣಿಯಾಗಿದ್ದೇನೆ.

ಶುಂಠಿಕೊಪ್ಪ<br>
೧೫–೨–೩೯

ಮಿಸೆಸ್ **ಬಿ. ಟಿ. ಜಿ. ಕೃಷ್ಣ**

# ಕಂಬನಿ

*"I Slept and dreamt that life is beauty,*
*I woke and found that life is duty"*

# ವಾಣಿಯ ಸಮಸ್ಯೆ

೧

ಇಂದು ಆ ದಿನ ಬೆಳಗ್ಗೆ ಎದ್ದು ಹೊರಗೆ ಬರುವಾಗ ಬಹಳ ವರ್ಷಗಳಿಂದ ಖಾಲಿಯಾಗಿದ್ದ ನೆರೆಮನೆಗೆ ಯಾರೋ ಒಕ್ಕಲು ಬಂದಿದ್ದಂತೆ ತೋರಿತು. ಮನೆಯ ಇದಿರೊಂದು ಸಾಮಾನು ತುಂಬಿದ ಲಾರಿ ನಿಂತಿತ್ತು. ಒಳಗಿನಿಂದ ಮಾತು ಕೇಳಿಸುತ್ತಿತ್ತು. ನೋಡಿ ಐದಾರು ವರ್ಷಗಳಿಂದ ಖಾಲಿ ಬಿದ್ದಿದ್ದ ಆ ಮನೆಗೆ ಬಂದವರು ಯಾರು ಎಂದು ತಿಳಿದುಕೊಳ್ಳುವ ಕುತೂಹಲಕ್ಕಿಂತಲೂ ಹೆಚ್ಚಾಗಿ ಇಂದುಗೆ ಬೇಸರವಾಯ್ತು. 'ನೆರೆಮನೆ ಅಜ್ಜಿ ಹೋದರೆ ಕರು ಕಟ್ಟಲು ಸ್ಥಳವಾಯ್ತು' ಎನ್ನುವ ಸ್ವಭಾವ ಇಂದುವಿನದಲ್ಲವಾದರೂ ಆ ಮನೆಗೆ ಒಕ್ಕಲು ಬಂದುದರಿಂದ ಅವಳಿಗೆ ಸಂತೋಷಕ್ಕಿಂತ ವ್ಯಸನವೇ ಹೆಚ್ಚಾಯ್ತು ಎಂದರೆ ತಪ್ಪಾಗಲಾರದು. ಅವಳಿಗೆ ಹಾಗಾಗಲು ಕಾರಣವೂ ಇತ್ತು.

ಇಂದು ಹುಟ್ಟುವ ಮೊದಲೇ ತಂದೆಯನ್ನೂ ಹುಟ್ಟುವಾಗ ತಾಯನ್ನೂ ಕಳೆದುಕೊಂಡು ದಾಯಾದಿಗಳ ಮನೆಯಲ್ಲಿ ಎಲ್ಲರಿಗೂ ಹೊರೆಯಾಗಿ ಬೆಳೆದವಳು. ಇಷ್ಟೇ ಸಾಲದು ಎಂದೇನೋ—ಮದುವೆಯಾಗಿ ಆರು ತಿಂಗಳಾಗುವ ಮೊದಲೇ ವೈಧವ್ಯ ಬೇರೆ ಪ್ರಾಪ್ತವಾಗಿ ಹೋಗಿತ್ತು. ಅವಳೀಗ ವಾಸಿಸುತ್ತಿರುವ ಆ ಪುಟ್ಟ ಮನೆಯೇ ಅವಳಿಗೆ ಒಂದಾನೊಂದು ಕಾಲದಲ್ಲಿ ಮದುವೆಯಾಗಿತ್ತು ಎಂಬುದರ ಗುರುತು. ತಾನು ಬದುಕುವುದು ಅಸಂಭವ ಎಂದು ತಿಳಿದಾಗ ಅವಳ ಗಂಡ ಅವಳ ಹೆಸರಿಗೆ ಮಾಡಿಟ್ಟಿದ್ದ ಸ್ವಲ್ಪ ಹಣವೂ ಆ ಮನೆಯೂ ಸಿಕ್ಕಿ, ಇಂದುವಿನ ಜೀವನವೇನೋ ಇತರರ ಹಂಗಿಲ್ಲದೆ ಸುಸೂತ್ರವಾಗಿ ಸಾಗುತ್ತಿತ್ತು.

ಕಂ ಬ ನಿ

ಆ ಮನೆ ಎಂದರೆ ಅವಳಿಗೆ ಬಲು ಪ್ರೀತಿ. ಅದನ್ನು ಸುಂದರವಾಗಿಟ್ಟುಕೊಳ್ಳುವುದೊಂದೇ ಅವಳ ಜೀವನದ ಗುರಿ. ತಾನು, ತನ್ನದು ಎಂಬುದಕ್ಕೆ ಎಡೆಯಿಲ್ಲದೆ ಬೆಳೆದು ಬೇಸತ್ತ ಅವಳಿಗೆ ಆ ಮನೆಯ ಮೇಲೆ ಅಷ್ಟೊಂದು ಪ್ರೀತಿ ಇದ್ದುದೇನೂ ಆಶ್ಚರ್ಯವಲ್ಲ. ಮತ್ತೆ ಅವಳ ಜೀವನದಲ್ಲಿ ಸ್ವಲ್ಪವಾದರೂ ಸುಖವನ್ನು ಕಂಡಿದ್ದರೆ ಅದೂ ಆ ಮನೆಯಲ್ಲಿಯೇ. ಅವನು ಸತ್ತುಹೋದರೆ ತನ್ನ ಜೀವನವೇ ಹಾಳಾಯ್ತು ಎಂಬ ತಿಳುವಳಿಕೆ ಬರುವ ಮೊದಲೇ ಅವಳ ಗಂಡ ಸತ್ತುಹೋಗಿದ್ದ. ಮದುವೆಯಲ್ಲವನ ಮುಖ ಕಂಡವಳು ಮತ್ತೊಮ್ಮೆ ನೋಡಿದ್ದು ಸತ್ತಮೇಲೆ. ಹಾಗೆ ನೋಡುವುದಾದರೆ ಅವನು ಸತ್ತಮೇಲೆಯೇ ಅವಳ ಜೀವನ ಕೊಂಚ ಸುಖಮಯವಾಯಿತೆನ್ನಬೇಕು. ಏಕೆಂದರೆ ಅವಳಿಗಾಗಿ ಅವನಿಟ್ಟಿದ್ದ ಧನದ ಲೋಭದಿಂದ ಮನೆಯವರ ಪ್ರೀತಿ ಅವಳ ಮೇಲೆ ಹೆಚ್ಚಾಯಿತು. ಆದರೆ ಇಂದು ಬುದ್ಧಿ ಬಂದು ತಿಳಿದುಕೊಳ್ಳುವಷ್ಟಾದ ಮೇಲೆ ತಾನೇ ಬೇರೆಯಾಗಿ ಸ್ವತಂತ್ರವಾಗಿರಲು ಬಯಸಿದಳು. ಅವಳ ಮೇಲಲ್ಲದಿದ್ದರೂ ಅವಳ ಹಣದ ಮೇಲಿನ ಪ್ರೀತಿಯಿಂದ ಮನೆಯವರು 'ತರುಣಿಯಾದ ನೀನೊಬ್ಬಳೇ ಬಂದು ಮನೆಯಲ್ಲಿರುವುದು ಸರಿಯಲ್ಲ' ಎಂದು ಎಷ್ಟೋ ಹೇಳಿದರೂ ಇಂದು ಮಾತ್ರ ತನ್ನ ನಿಶ್ಚಯವನ್ನು ಬದಲಾಯಿಸಲಿಲ್ಲ.

ಇದು ಆರು ವರ್ಷಗಳ ಹಿಂದಿನ ಮಾತು. ಆಗವಳಿಗೆ ಇಪ್ಪತ್ತು ವರ್ಷ ವಯಸ್ಸು. ಅವಳು ಊರು ಬಿಟ್ಟು ಆ ಮನೆಗೆ ಬರುವಾಗಲೇ ನೆರೆ ಮನೆ ಖಾಲಿಯಿತ್ತು. ಅಂದಿನಿಂದಿಂದಿನವರೆಗೂ ಇಂದುಗೆ ತನ್ನ ಮನೆಯ ಹಿತ್ತಲಷ್ಟೇ ಸ್ವತಂತ್ರದಿಂದ ನೆರೆಮನೆಯ ಹಿತ್ತಲಲ್ಲೂ ಹೋಗಿಬರುವುದು ವಾಡಿಕೆಯಾಗಿ ಹೋಗಿತ್ತು. ಕಾಲಕ್ರಮದಲ್ಲಿ ಮುರಿದ ಮಧ್ಯದ ಬೇಲಿಯನ್ನು ಸಹ ಕಟ್ಟಿಸುವ ಆವಶ್ಯಕತೆ ಅವಳಿಗೆ ತೋರಿಬರಲಿಲ್ಲ.

ಅವಳದು ಏಕಾಂತವನ್ನು ಬಯಸುವ ಜೀವ. ಹುಟ್ಟಿದಂದಿನಿಂದ ತನ್ನವರು, ತನ್ನದು ಎಂಬುದಿಲ್ಲದೆ ಒಂಟಿಯಾಗಿ ಬೆಳೆದಿದ್ದ ಅವಳಿಗೆ ಸ್ವತಂತ್ರವಾದಮೇಲೂ ಬೇರೆಯವರ ಸಹವಾಸ, ಸ್ನೇಹ, ಪ್ರೀತಿಗಳು ಅಗತ್ಯವಾಗಿ ಕಾಣಬರಲಿಲ್ಲ. ಹಾಗೊಮ್ಮೆ ಅವಶ್ಯವೆಂದು ತೋರಿದ್ದರೂ

ತಾನಾಗಿ ಇನ್ನೊಬ್ಬರ ಸ್ನೇಹವನ್ನು ಕೋರದಷ್ಟು ಸಂಕೋಚವುಳ್ಳ ಪ್ರಕೃತಿ ಅವಳದು. ಆದರಿಂದ ತಾನೇತಾನಾಗಿದ್ದ ಅವಳಿಗೆ ನೆರೆಮನೆಗೆ ಒಕ್ಕಲು ಬಂದಿರುವುದು ಎಂದು ತಿಳಿದಾಗ ಸಂತೋಷವಾಗದಿದ್ದುದು ಆಶ್ಚರ್ಯವಲ್ಲ. ಆದರೆ ಅವಳ ಸಂತೋಷವನ್ನೇನೂ ನೆರೆಮನೆಯ ಒಕ್ಕಲು ಹೊಂದಿಕೊಂಡಿರಲಿಲ್ಲ. ಅದು ಅವಳಿಗೂ ತಿಳಿದಿದ್ದರೂ 'ಬಂದರಲ್ಲಾ' ಎಂದಾಗದೆ ಮಾತ್ರ ಹೋಗಲಿಲ್ಲ. ಇನ್ನು ಮುರಿದ ಬೇಲಿಯನ್ನು ಕಟ್ಟಿಸ ದಿದ್ದರೆ ತನ್ನ ಏಕಾಂತಕ್ಕೆ ಭಂಗಬರುವುದೆಂದುಕೊಂಡು ಇಂದು ಒಳಗೆ ಹೋದವಳು ಆ ದಿನ ಮತ್ತೆ ಹಿತ್ತಲ ಕಡೆಗೆ ಹೋಗಲಿಲ್ಲ.

೨

ಮರುದಿನ ಇಂದು ಮುರಿದ ಬೇಲಿಯನ್ನು ಸರಿಮಾಡಿಸುತ್ತಿದ್ದಾಗ ನೆರೆಮನೆಯ ಹಿತ್ತಲ ಬಾವಿಯ ಹತ್ತಿರ ತನ್ನ ಪ್ರಾಯದ ಹೆಂಗಸೊಬ್ಬ ಳನ್ನು ನೋಡಿದಳು. ಅವಳೂ ಇವಳನ್ನು ನೋಡಿದಳು. ನೋಡಿ ಮುಗುಳು ನಕ್ಕಳು. ಆ ನಗುವಿನ ಪ್ರತಿಬಿಂಬ ಇಂದುವಿನ ಮೋರೆಯಲ್ಲೂ ಮೂಡಿತು. ಸರಿ, ಮತ್ತೆರಡು ದಿನಗಳ ಕೆಲಸವಿದ್ದರೂ ಆ ದಿನದ ತರುವಾಯ ಬೇಲಿಯ ಕೆಲಸವು ಮುಂದುವರಿಯಲಿಲ್ಲ.

ಈ ರೀತಿ ನಗುವಿನಿಂದ ಮೊದಲಾದ ಇಂದು ಮತ್ತು ನೆರೆಮನೆಯ ವಾಣಿಯ ಪರಿಚಯವು ಒಂದು ವಾರ ತುಂಬುವುದರೊಳಗೆ ಸ್ನೇಹದ ದಾರಿ ಹಿಡಿದಿತ್ತು. ಯಾರ ಸ್ನೇಹವನ್ನೂ ಬಯಸದ ಇಂದುಗೇ ವಾಣಿಯ ವಿಷಯಕ್ಕೆ ತನ್ನಲ್ಲಿ ಮೂಡಿದ್ದ ಆದರವನ್ನು ನೋಡಿ ಆಶ್ಚರ್ಯವಾಗು ತ್ತಿತ್ತು. ವಾಣಿಯೇನೋ ಊರಿಗೆ ಹೊಸಬಳು. ಯಾರೊಬ್ಬರ ಗುರುತು ಪರಿಚಯವೂ ಇಲ್ಲ. ದಿನ ಬೆಳಗಾದರೆ ನೆರೆಮನೆಯ ಇಂದುವಿನ ಮುಖ ಕಾಣುವುದು. ವಾಣಿಗೆ ಅವಳ ಪರಿಚಯ ಕ್ರಮವಾಗಿ ಸ್ನೇಹವಾದುದು ಆಶ್ಚರ್ಯದ ಮಾತಲ್ಲ. ಆದರೆ ಅಷ್ಟೇ ಸಹಜಸ್ನೇಹದ ಸುಳಿವನ್ನೇ ಅರಿ ಯದ ತನ್ನ ಹೃದಯದಲ್ಲೂ ಆ ಸ್ನೇಹ ಪ್ರತಿಬಿಂಬಿಸುವುದೆಂದು ಮಾತ್ರ ಇಂದುಗೆ ತಿಳಿಯದು.

ಆ ಮನೆಯಲ್ಲಿ ವಾಣಿ ಮತ್ತು ಅವಳ ಗಂಡ ರತ್ನ ಇಬ್ಬರೇ. ರತ್ನ ಆ ಊರಿಗೆ ಹೊಸದಾಗಿ ವರ್ಗವಾಗಿ ಬಂದ ಡಾಕ್ಟರ್. ಊರಿಗೆ ಒಬ್ಬನೇ ಡಾಕ್ಟರ್ ಆದುದರಿಂದ ಊಟ ತಿಂಡಿಗಳಿಗೆ ಸಹ ಬಿಡುವಿಲ್ಲದಷ್ಟು ಕೆಲಸ ಅವನಿಗೆ. ವಾಣಿಗಂತೂ ಮನೆಯೊಳಗೊಬ್ಬಳೇ ಇರುವುದಕ್ಕೆ ಬೇಸರ. ಆದರಿಂದ ಅವಳ ಮುಕ್ಕಾಲು ಸಮಯವೆಲ್ಲಾ ಇಂದುವಿನ ಮನೆಯಲ್ಲೇ ಕಳೆಯುತ್ತಿತ್ತು. ಇಂದುವೂ ಒಂದೆರಡು ಸಾರಿ ಅವಳ ಮನೆಗೆ ಹೋಗಿದ್ದಳು.

ಇಂದು ಮೊಟ್ಟಮೊದಲು ವಾಣಿಯ ಮನೆಗೆ ಹೋದಾಗ ಬಟ್ಟೆ-ಬರೆ, ಪಾತ್ರೆ-ಪದಾರ್ಥಗಳೆಲ್ಲಾ ಮನೆತುಂಬ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ವಾಣಿ 'ಏನೋ ಹೊಸದಾಗಿ ಬಂದುದರಿಂದ ಮನೆಯನ್ನಿನ್ನೂ ವ್ಯವಸ್ಥಿತರೀತಿಗೆ ತರಲು ಸಮಯವಾಗಲಿಲ್ಲ' ಎಂದು ಹೇಳಿದರೂ ತನ್ನ ಮನೆಯನ್ನು ಸದಾ ಸುವ್ಯವಸ್ಥಿತರೀತಿಯಲ್ಲಿಟ್ಟುಕೊಂಡಿದ್ದ ಇಂದುಗೆ 'ಬಂದು ಹದಿನೈದು ದಿನಗಳಾದರೂ ಇನ್ನೂ ಸಮಯವಾಗಿಲ್ಲವೇ?' ಎಂದು ಆಶ್ಚರ್ಯ. ಆ ದಿನ ಅವುಗಳನ್ನೆಲ್ಲಾ ಸರಿಮಾಡಿಡಲು ವಾಣಿಗೆ ನೆರವಾದಳು. ಮಧ್ಯಾಹ್ನ ಎರಡು ಗಂಟೆಗೆ ಕೆಲಸ ಶುರು ಮಾಡಿದ್ದರೂ ಎಲ್ಲವನ್ನೂ ಸರಿಯಾಗಿ ಮಾಡುವಾಗ ಕತ್ತಲಾಗುವ ಸಮಯವಾಗಿತ್ತು. ಅಂತೂ ಎಲ್ಲಾ ಮುಗಿಯುವಾಗ ಮನೆಯು ಸ್ವಚ್ಛವಾಗಿ, ಸುಂದರವಾಗಿ ತೋರಿತು.

ಈ ಕೆಲಸದಲ್ಲಿ ವಾಣಿಗೆ ಇಂದು ನೆರವಾದಳು ಎನ್ನುವುದಕ್ಕಿಂತ ಇಂದುಗೆ ವಾಣಿ ನೆರವಾದಳು ಎಂದರೆ ಸರಿಯಾಗಬಹುದು. ಮುಕ್ಕಾಲು ಕೆಲಸ ಮಾಡಿದವಳು ಇಂದು. ಯಾವ ಯಾವ ಪದಾರ್ಥವನ್ನು ಎಲ್ಲೆಲ್ಲಿ ಇಡಬೇಕು; ಹೇಗೆ ಇಟ್ಟರೆ ಹೆಚ್ಚು ಸುಂದರವಾಗಿ ತೋರಬಹುದು ಎಂದು ಆಲೋಚಿಸಿ ಸರಿಮಾಡಿ ಅಣಿಯಾಗಿಟ್ಟವಳು ಇಂದು. ಇಂದು ಹೊರಲಾರದ ದೊಡ್ಡದೊಡ್ಡ ವಸ್ತುಗಳನ್ನು ಎತ್ತಿಡಲು ಸಹಾಯ ಮಾಡುವುದು ಅಥವಾ ಅವಳು ಹೇಳಿದ ಸಾಮಾನುಗಳನ್ನು ತಂದು ಕೊಡುವುದು—ಇವು ವಾಣಿ ಮಾಡಿದ ಕೆಲಸ. ಅಂತೂ ಅವರ ಕೆಲಸ

ಮುಗಿಯುವಾಗ ಮನೆಯೊಂದು ಹೊಸ ಕಳೆ ತಳೆದಿತ್ತು. ವಾಣಿಗಂತೂ ರೂಪು ಬದಲಾದ ತನ್ನ ಮನೆಯನ್ನು ನೋಡಿ ಹಿಡಿಸಲಾರದಷ್ಟು ಆಶ್ಚರ್ಯ –ಆನಂದ.

ಅವಳದು ಜನ್ಮತಃ ಉದಾಸೀನ ಪ್ರವೃತ್ತಿ. ಯಾವ ಕೆಲಸವನ್ನಾದರೂ ನಾಳೆ ಮಾಡಿದರಾಯ್ತು ಎನ್ನುವ ಪ್ರಕೃತಿ. ನಾಳೆ ನಾಳೆ ಎಂದು ಯಾವಾಗಲೂ ಅವಳ ಕೆಲಸಗಳು ನಾಳೆಗಾಗಿ ಬಿದ್ದಿರುತ್ತಿದ್ದುವು. ಅದರಿಂದ ಸಹಜವಾಗಿಯೇ ಅವಳ ಮನೆ ಎಂದೂ ಅಂದಿನಷ್ಟು ಸುಂದರವಾಗಿ ತೋರಿರಲಿಲ್ಲ.

ಆ ದಿನ ಸಾಯಂಕಾಲ ರತ್ನ ಸ್ವಲ್ಪ ಬೇಗನೆ ಬಂದ. ಅವನಿಗೂ ತನ್ನ ಮನೆಯ ಸುವ್ಯವಸ್ಥಿತ ರೀತಿಯನ್ನು ನೋಡಿ ಬಹಳ ಆಶ್ಚರ್ಯವಾಗದಿರಲಿಲ್ಲ. ಆದರೆ ಕಾಫಿ ಕುಡಿದು ಮುಗಿಯುವ ಮೊದಲೇ ವಾಣಿಯ ಬಾಯಿಂದ ಮನೆಯ ಆ ರೂಪಿಗೆ ಕಾರಣಳಾದವಳು ನೆರೆಮನೆಯ ಇಂದು ಎಂದು ತಿಳಿಯಿತು. ತಿಳಿದು–'ನನ್ನ ವಾಣಿಯೂ ಗೃಹಕಾರ್ಯಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸುವಂತಾಗಿದ್ದರೆ' ಎಂದೆನ್ನಿಸಿತವನಿಗೆ. ತನ್ನ ಬಯಕೆಗಳು ಪೂರ್ತಿಯಾಗುವುದು ತಾನು ಬಯಸಿದಷ್ಟು ಸುಲಭವಲ್ಲ ಎಂಬುದು ರತ್ನನ ಐದು ವರ್ಷಗಳ ದಾಂಪತ್ಯ ಜೀವನದ ಅನುಭವ. ಆದರೆ ಇನ್ನೂ ರತ್ನನಿಗೆ 'ಹಾಗಾಗಿದ್ದರೆ–ಹೀಗಾಗಿದ್ದರೆ' ಎಂದು ಅಂದುಕೊಳ್ಳದಿರುವಷ್ಟು ನಿರಾಸೆಯಾಗಿರಲಿಲ್ಲ.

ರತ್ನ ಕೆಲಸ ತೀರಿಸಿ ದಣಿದು ಬರುವಾಗ ವಾಣಿ ಇಂದುವಿನ ಮನೆಯಲ್ಲಿ ಹರಟೆಹೊಡೆಯುತ್ತ ಕೂತುಬಿಡುತ್ತಿದ್ದಳು. ರತ್ನ ಬಂದ ಮೇಲೆ ಓಡಿ ಹೋಗಿ ಮತ್ತೆ ಕಾಫಿ ಮಾಡಬೇಕು. ವಾಣಿಯ ಕಾಫಿಯಾಗುವುದರೊಳಗೆ ರತ್ನನನ್ನು ಕೂಗಲು ಯಾರಾದರೂ ಬಂದೇಬರುವರು. ಎಷ್ಟೋ ಸಾರಿ ಅವನು ಏನನ್ನೂ ತೆಗೆದುಕೊಳ್ಳದೆ ಹಾಗೆಯೇ ಹೊರಟುಹೋಗ-ಪಡಬೇಕಾಗುತ್ತಿತ್ತು. ಆ ಮೇಲೆ ಸ್ವಲ್ಪ ಹೊತ್ತು 'ಅಯ್ಯೋ, ಬೇಗನೆ ಕಾಫಿ ತಿಂಡಿ ಮಾಡಿಟ್ಟಿರಬೇಕಿತ್ತು' ಎಂದು ವಾಣಿ ನೊಂದುಕೊಳ್ಳುತ್ತಿದ್ದಳೇನೋ ನಿಜ; ಆದರೆ ಅದು ಸ್ವಲ್ಪ ಹೊತ್ತು ಮಾತ್ರ. ಮರುದಿನ ಯಥಾ

ಕಂ ಬ ನಿ

ಪ್ರಕಾರ...ರತ್ನನ ಬಟ್ಟೆಬರೆಗಳೂ ಹಾಗೆಯೇ-ಅವನಿಗೆ ಬೇಕಾದಷ್ಟು ಬಟ್ಟೆಬರೆಗಳಿದ್ದರೂ ಬೇಕಾದಾಗ ಒಂದು ಟೈ ಸಹ ಸರಿಯಾಗಿ ಸಿಕ್ಕು ವುದು ಕಷ್ಟವಾಗುತ್ತಿತ್ತು.

ಮದುವೆಯಾದ ಹೊಸತರಲ್ಲಿ, ರತ್ನನಿಗೆ ನವಪ್ರಣಯದ ಭರದಲ್ಲಿ ವಾಣಿಯ ಈ ಕುಂದುಕೊರತೆಗಳೊಂದೂ ತಿಳಿಯದಿದ್ದರೂ ದಿನಗಳು ಕಳೆದಂತೆ ಅವನಿಗೆ 'ನನ್ನ ವಾಣಿಯು ಹೀಗೇಕೆ?' ಎಂದಾಗದೆ ಹೋಗು ತ್ತಿರಲಿಲ್ಲ. ಆದರೆ ಅವಳ ಪಶ್ಚಾತ್ತಾಪದಿಂದ ಕೂಡಿದ ಮುಖ, ತುಂಬಿದ ಕಣ್ಣುಗಳನ್ನು ನೋಡುವಾಗ ಅವನಿಗೆ ಏನನ್ನುವುದಕ್ಕೂ ತೋರದೆ ಅವಳನ್ನು ಸಂತೈಸಿ, ನಗಿಸಿ, ನಕ್ಕು ನಲಿಯುತ್ತಿದ್ದ. ಇನ್ನು ಮುಂದೆ ಹೀಗೆ ಮಾಡಬೇಡವೆಂದು ಹೇಳಿ ಸ್ವಲ್ಪ ಕೋಪಿಸಿ ವಾಣಿಗೆ ಬುದ್ಧಿ ಕಲಿಸ ಬೇಕೆನ್ನುವ ಅವನ ಪ್ರಯತ್ನಗಳಿಗೆಲ್ಲಾ ಇದೇ ರೀತಿಯ ಅಂತ್ಯಗಳಾಗು ತ್ತಿದ್ದುವು.

ದಿನಕಳೆದಂತೆ-ಅವರವರ ಸ್ನೇಹ ಬೆಳೆದಂತೆ ವಾಣಿಯ ಈ ತರದ ಅಲಕ್ಷತನ ಇಂದುಗೆ ತಿಳಿಯದಿರಲಿಲ್ಲ. ಅವಳಿಗೆ ತಿಳಿಯದಿದ್ದರೂ ಹೀಗೇ ನಾದರೂ ನಡೆದಾಗಲೆಲ್ಲ ವಾಣಿ ಇಂದುವಿನೆದುರು ತಾನೇ ಹೇಳುತ್ತಿ ದ್ದಳು. ತನ್ನ ತಿಳಿಗೇಡಿತನವನ್ನು ಹಳಿದುಕೊಳ್ಳುತ್ತಿದ್ದಳು. ಮೊದ ಮೊದಲು ಇಂದು ವಾಣಿಯನ್ನು ಸಮಾಧಾನಪಡಿಸುತ್ತಿದ್ದಳು. ಆದರೆ ಯಾವಾಗಲೂ ಅವಳ ಪ್ರಕೃತಿಯೇ ಹೀಗೆಂದು ತಿಳಿದ ಮೇಲೆ ಮಾತ್ರ ಇಂದುಗೆ 'ರತ್ನನಂಥ ಗಂಡನನ್ನು ಪಡೆದೂ ಅವನನ್ನು ಸುಖದಲ್ಲಿಟ್ಟಿರ ಲಾರಳಲ್ಲ ಈ ವಾಣಿ!' ಎಂದು ಆಶ್ಚರ್ಯ. 'ತನ್ನ ಪತಿಯಾಗಿದ್ದರೆ ತಾನು ಹೇಗೆ ನಡೆದುಕೊಳ್ಳುತ್ತಿದ್ದೆ' ಎಂದು ಒಂದು ನಿಟ್ಟುಸಿರು. ಮತ್ತೆ 'ಥೂ, ಹುಚ್ಚು ಯೋಚನೆ' ಎಂದೊಂದು ಮೋಡಮುಚ್ಚಿದ ನಗು.

೩

ಒಂದು ದಿನ ಬೆಳಗ್ಗೆ ಸುಮಾರು ಹನ್ನೊಂದು ಗಂಟೆಯ ಹೊತ್ತಿನಲ್ಲಿ ಇಂದು ಅಡಿಗೆ ಮಾಡುತ್ತಿರುವಾಗ ವಾಣಿ ಬಂದಳು. ಇಂದುವಿನ ಮನೆಗೆ

ವಾಣಿ ಬರುವುದಕ್ಕೆ ಸಮಯಾಸಮಯಗಳ ಕಟ್ಟುಗಳಿರಲಿಲ್ಲ. ಬೆಳಗ್ಗೆ ಎದ್ದಂದಿನಿಂದ ರಾತ್ರಿ ಮಲಗುವ ತನಕ ಆ ಮನೆಯಿಂದ ಈ ಮನೆಗೆ, ಈ ಮನೆಯಿಂದ ಆ ಮನೆಗೆ ಓಡಾಡುವುದು ಅವಳ ಪದ್ಧತಿ. ಅವಳು ಬಂದು ಹೋಗುವುದರಲ್ಲಿ ವಿಶೇಷವೇನೂ ಇಲ್ಲ. ಆದರೆ ಆ ದಿನದ ವಾಣಿಯ ಬರುವು ಇಂದುವಿನ ಶಾಂತಜೀವನ ಪ್ರವಾಹವನ್ನು ಅಲ್ಲೋಲ ಕಲ್ಲೋಲ ಮಾಡಲು ಕಾರಣವಾಯ್ತು. ವಾಣಿ ಬಂದುದು ಹೆಚ್ಚಿನ ಕೆಲಸಕ್ಕೇನೂ ಅಲ್ಲ. ಸಾರಿಗೆ ಬೇಳೆ ಬೇಯಲು ಹಾಕಿ ಅದು ಬೇಯುವ ತನಕ ಸುಮ್ಮನೆ ಕೂತಿರಬೇಕೇಕೆಂದು ಇಂದುವಿನ ಮನೆಗೆ ಹರಟೆ ಹೊಡೆಯಲು ಬಂದಿದ್ದಳಷ್ಟೆ.

ಮಧ್ಯಾಹ್ನದ ಮೇಲೆ ತುಂಬಾ ಕೆಲಸವಿದ್ದ ರತ್ನ, ಬೇಗನೆ ಊಟ ತೀರಿಸಿ ಹೋಗಬೇಕೆಂದು ಆ ದಿನ ಬೇಗನೆ ಮನೆಗೆ ಬಂದ. ಮನೆಯಲ್ಲಿ ವಾಣಿ ಇಲ್ಲ–ಒಂದೆರಡು ಬಾರಿ ಕೂಗಿದ. ಪ್ರತ್ಯುತ್ತರವೂ ಇಲ್ಲ. ಕೊನೆಗೆ ಹಿತ್ತಲಲ್ಲಿರಬಹುದೇನೋ ಎಂದು ಬಂದು ನೋಡುವಾಗ ಇಂದುವಿನ ಮನೆಯಿಂದ ವಾಣಿಯ ಮಾತು ಕೇಳಿಸಿತು. ಮಧ್ಯಾಹ್ನದ ವೇಳೆಯಲ್ಲಿ ಮಾಡುವ ಕೆಲಸ ಬಿಟ್ಟು ನೆರೆಮನೆಗೆ ಹೋಗಿ ಸಮಯ ಕಳೆಯುತ್ತಿರುವಳಲ್ಲ ಎಂದು ಸ್ವಲ್ಪ ಕೋಪವೂ ಬಂತು. 'ವಾಣೀ' ಎಂದು ಸ್ವಲ್ಪ ಗಟ್ಟಿಯಾಗಿಯೇ ಕೂಗಿದ. ಮಾತಿನ ಸಂಭ್ರಮದಲ್ಲಿ ಅವಳಿಗದು ಕೇಳಲಿಲ್ಲ. ಅವಳ ಮಾತಿನ ಗಲಾಟೆಯಲ್ಲಿ ಇಂದುಗೂ ಕೇಳಿಸುವಂತಿರಲಿಲ್ಲ. ಆದುದರಿಂದ ಮಾತಿನಲ್ಲಿ ಮುಳುಗಿದ್ದ ಅವರಿಗೆ ರತ್ನ ಹಿತ್ತಲ ಬೇಲಿಯ ಹತ್ತಿರ ಬಂದು ಪುನಃ ಜೋರಾಗಿ 'ವಾಣೀ' ಎನ್ನುವಾಗ ತುಂಬ ಗಾಬರಿಯಾಯ್ತು. ವಾಣಿಯಂತೂ 'ಅಯ್ಯೋ ಇಂದೂ, ಇನ್ನೂ ಅಡಿಗೇ ಆಗ್ಲಿಲ್ಲ' ಎಂದು ಅವಸರದಿಂದ ಹೊರಗೆ ಬಂದಳು. ಇಂದುವೂ ಅವಳನ್ನು ಹಿಂಬಾಲಿಸಿ ಬಾಗಿಲ ಹತ್ತಿರ ಬರುವಾಗ ಬೇಲಿಯ ಹತ್ತಿರ ನಿಂತಿದ್ದ ದಣಿದ ರತ್ನನನ್ನು ನೋಡಿದಳು. ವಾಣಿ 'ಎಷ್ಟೊತ್ತಾಯ್ತು ಬಂದೂ. ಈಗ್ಲೇ ಆಸ್ಪತ್ರೆಗೆ ಮತ್ತೆ ಹೋಗ್ಬೇಕೇ?' ಎಂದು ಕೇಳುತ್ತಿದ್ದಳು. ಇಂದು ಅವಳ ಮಾತುಗಳನ್ನು ಕೇಳಿ ರತ್ನನಿಗೆ ಪುನಃ ಉಪವಾಸವ್ರತ ಎಂದು ತಿಳಿದುಕೊಂಡಳು.

೫೦ ಬ ನಿ

ರತ್ನಸಿಗೇನೋ ಹಿಂದೆ ಅನೇಕ ಸಾರಿ ಈ ತರದ ಅನುಭವಗಳಾಗಿದ್ದರೂ ಇಂದುವಿಗೆ ಆಗಲೇ ಆದರ ಖುದ್ದಾದ ಅನುಭವ. ತಾನು ವಾಣಿಯ ಸಮಯವನ್ನು ಹಾಳುಹರಟೆಯಲ್ಲುಪಯೋಗಿಸಲು ಸಹಾಯಕಳಾದೆನಲ್ಲಾ ಎಂದು ಬಹಳ ಬೇಸರವೂ ಆಯ್ತು. ಬಾಗಿಲ ಸಂದಿನಿಂದ ದಣಿದು ಬೆಂಡಾಗಿದ್ದ ರತ್ನನನ್ನು ನೋಡುತ್ತಿದ್ದಂತೆ ಮನಸ್ಸಿನಲ್ಲಿ ಈ ಭಾವನೆಗಳು ಮೂಡುತ್ತಿದ್ದುವು. ಮತ್ತೆ ಎಂದೂ ಇಲ್ಲದ ಏನೇನೋ ಯೋಜನೆಗಳು ಒಂದರ ಮೇಲೊಂದಾಗಿ ಬರತೊಡಗಿದುವು. ಅವುಗಳನ್ನೇ ಹಿಂಬಾಲಿಸುವಂತೆ ನಿಡಿದಾದ ನಿಟ್ಟುಸಿರೊಂದು ಹೊರಬಿತ್ತು. ಕಣ್ಣೀರ ಕಾಲುವೆಯೊಡೆಯಲು ಇಷ್ಟೇ ಸಾಕಾಯಿತ್ತು. 'ಅಯ್ಯೋ ದೇವರೇ' ಎಂದು ಉಕ್ಕುತ್ತಿದ್ದ ಕಣ್ಣೀರನ್ನು ಸೆರಗಿನಿಂದ ಒರಸುತ್ತಾ ಒಳಗೆ ಬಂದಳು. ಅಷ್ಟು ಹೊತ್ತಿಗೆ ವಾಣಿರತ್ನರೂ ತಮ್ಮಮನೆಯ ಜಗಲಿ ತಲುಪಿದ್ದರು.

೪

ಇಂದು ಒಳಗೆ ಬಂದಳು. ಒಂದೇ ಒಂದು ಗಳಿಗೆಯ ಹಿಂದೆ ಅವಳ ಜೀವನದಲ್ಲಿ ಶಾಂತಿಯಿತ್ತು—ಸಂತೋಷವಿತ್ತು—ಏನೋ ಒಂದು ತರದ ತೃಪ್ತಿಯೂ ಇತ್ತು. ಮತ್ತೆ ತನ್ನ ಮನೆ, ಅದರ ಸೌಂದರ್ಯ ಸ್ವಚ್ಛತೆಗಳಿಗಾಗಿ ಅಭಿಮಾನವಿತ್ತು. ಅದೇಕೋ—ಆ ಒಂದು ಗಳಿಗೆಯ ಹಿಂದಿದ್ದ ಅವಳ ಆ ಆನಂದ, ಅಭಿಮಾನ, ಶಾಂತಿ, ತೃಪ್ತಿ ಎಲ್ಲಾ ಇಂದು ಒಳಗೆ ಬರುವಾಗ ಮಾಯವಾಗಿದ್ದುವು. ಬದಲಾಗಿ ಅವುಗಳ ಸ್ಥಾನವನ್ನು ಹಿಂದೆಂದೂ ಇಂದುವನ್ನು ಬಾಧಿಸದ ಪ್ರಶ್ನೆಗಳು ಬಂದು ಆವರಿಸಿದ್ದುವು. 'ವಾಣಿಗೆ—ಯಾವುದರ ಬೆಲೆಯನ್ನೂ ಅರಿಯದ ವಾಣಿಗೆ— ಎಲ್ಲವನ್ನೂ ಕೊಟ್ಟ ದೇವರು ತನ್ನ ಜೀವನವನ್ನೇಕೆ ಅಂಧಕಾರಮಯವನ್ನಾಗಿ ಮಾಡಿದ ?' ಎಂಬುದು ಎಲ್ಲದುದಕ್ಕಿಂತಲೂ ಅವಳಿಗೆ ಬಲು ದೊಡ್ಡದಾದ ಪ್ರಶ್ನೆಯಾಗಿ ತೋರಿತು. ಎಷ್ಟು ಯೋಚಿಸಿದರೂ ಪ್ರತ್ಯುತ್ತರ ದೊರೆಯದ ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವುದರಲ್ಲೇ ತಲ್ಲೀನಳಾದ ಇಂದು ಆ ದಿನ ಸಾಯಂಕಾಲ ಪುನಃ ವಾಣಿ ಬರುವತನಕವೂ ಕೂತಲ್ಲಿಂದ ಎದ್ದಿರಲಿಲ್ಲ. ಮಾಡಿಟ್ಟಿದ್ದ ಅಡಿಗೆಯೂ ಹಾಗೆಯೇ ಇತ್ತು.

ವಾಣಿಯ ದೀನ ಮುಖಮುದ್ರೆಯನ್ನು ನೋಡಿ ಹಿಂದೆ ಮರುಕ ಗೊಳ್ಳುತ್ತಿದ್ದ ಇಂದುಗೆ ಆ ದಿನ ಅವಳ ಅಳುಮೋರೆಯನ್ನು ನೋಡಿ ಸ್ವಲ್ಪ ಸಂತೋಷವೇ ಆಯಿತು. ದೇವರು ತನಗೊಬ್ಬಳಿಗೆಂದೇ ದುಃಖ ವನ್ನು ಮೀಸಲಾಗಿರಿಸಬೇಕೇಕೆ? ವಾಣಿಗೂ ಅದರ ರುಚಿ ಕೊಂಚ ಗೊತ್ತಾಗಲಿ ಎಂದು ಮನದಲ್ಲೇ ಹೇಳಿಕೊಂಡಳು. ತಾನು ಆ ರೀತಿ ಬಯಸುವುದು ಸ್ವಾರ್ಥವೆಂದೂ ತನ್ನ ದುಃಖಕ್ಕೆ ಕಾರಣಳು ವಾಣಿ ಅಲ್ಲವೆಂದೂ ಇಂದುಗೆ ತಿಳಿದಿದ್ದರೂ ವಾಣಿಯ ಬಾಡಿದ ಮುಖವು ಅವಳಲ್ಲಿ ಕರುಣೆಯನ್ನು ಹುಟ್ಟಿಸಲಿಲ್ಲ. ವಾಣಿ ಅಳಳುತ್ತಾ 'ಎಂದೂ ಏನೂ ಅನ್ನದಿದ್ದವರು ಕೋಪಿಸಿಕೊಂಡು ಹೊರಟುಹೋದರು' ಎಂದು ಹೇಳುವಾಗ ಇಂದುಗೆ ಒಂದು ತರದ ಆನಂದವೇ ಆಯ್ತು. ಆದರೆ ಮರು ಕ್ಷಣದಲ್ಲಿ ಆ ರೀತಿ ಸಂತೋಷಪಡುವುದು ತಪ್ಪು ಎಂದು, ಎಂದೂ ಆ ತರದ ಭಾವನೆಗಳಿಗೆ ಎಡೆಕೊಡದಿದ್ದ ಇಂದುವಿನ ಮನವು ಎಚ್ಚರಿಸಿದಾಗ ಅವಳಿಗೇ ತನ್ನ ನೀಚಭಾವನೆಗಳಿಗಾಗಿ ನಾಚಿಕೆಯಾಯ್ತು. ಆ ಭಾವನೆ ಗಳಿಗೆ ಎಡೆಕೊಟ್ಟ ತಪ್ಪಿನ ಪ್ರಾಯಶ್ಚಿತ್ತ ಸ್ವರೂಪವಾಗಿ ವಾಣಿಯನ್ನು ಸಂತೈಸಿ ಅವಳ ಕೆಲಸಕ್ಕೆ ನೆರವಾದಳು.

ಎಲ್ಲ ಕೆಲಸಗಳನ್ನು ತೀರಿಸಿ ಇಂದು ತನ್ನ ಮನೆಗೆ ಹಿಂತಿರುಗು ವುದೂ ರತ್ನ ತನ್ನ ಮನೆಗೆ ಬರುವುದೂ ಸರಿಯಾಯ್ತು. ಅವನಿಗೂ ಮಧ್ಯಾಹ್ನದಿಂದ ನೆಮ್ಮದಿ ಇಲ್ಲ. ಎಂದೂ ವಾಣಿಯೊಡನೆ ಕೋಪಿಸಿ ಕೊಂಡವನಲ್ಲ. ಬಹಳ ದಿನಗಳಿಂದ ತಡೆದಿದ್ದ ಅವನ ಸಮಾಧಾನವು ಆ ದಿನ ಹಸಿವಿನ ಭರದಲ್ಲಿ ತಡೆಯಲಾರದೆ ಕೋಪಕ್ಕೆ ಎಡೆಕೊಟ್ಟಿತ್ತು. ಕೋಪ ಇಳಿಯುತ್ತ ಬಂದಂತೆ ಅವನಿಗೆ ತನ್ನ ವರ್ತನೆಗಾಗಿ ಸ್ವಲ್ಪ ನಾಚಿಕೆ ಯಾಯ್ತು. ವಾಣಿ ಎಷ್ಟು ನೊಂದುಕೊಂಡಿರುವಳೋ ಎಂದು ಕ್ಲಬ್ಬಿಗೆ ಸಹ ಹೋಗದೆ ಮನೆಗೇ ನೇರವಾಗಿ ಬಂದಿದ್ದ. ಆದರೆ ಅವನೆಣಿಸಿದಂತೆ ವಾಣಿ ದೀಪವನ್ನು ಸಹ ಹತ್ತಿಸದೆ ಅಳುತ್ತ ಮಲಗಿರಲಿಲ್ಲ. ಅವನ ಮನೆ ಇಂದುವಿನ ಕೈವಾಡದಿಂದ ನೂತನ ರೂಪ ತಳೆದು ದೀಪದ ಬೆಳಕಿನಲ್ಲಿ ಬೆಳಗುತ್ತಿತ್ತು. ಸಗುಮುಖದ ವಾಣಿ ಅವನ ಬರುವನ್ನೇ ಇದಿರು ನೋಡುತ್ತ ಅಡಿಗೆಯನ್ನು ಸಿದ್ಧಪಡಿಸಿ ಕಾಯುತ್ತಿದ್ದಳು.

ಕಾ ಬ ನಿ

ಆದರೆ ಇದೆಲ್ಲಾ ನೋಡಿ ಅವನಿಗಾದ ಆಶ್ಚರ್ಯ–ಆನಂದ ಕೇವಲ ಒಂದೇ ಒಂದು ಗಳಿಗೆ ಮಾತ್ರ. ವಾಣಿಯು ಬಡಿಸುತ್ತಿದ್ದ ಅಡಿಗೆಯನ್ನು ಊಟ ಮಾಡುತ್ತಿರುವಾಗಲೇ ನೆರೆಮನೆಯ ಇಂದುವಿನ ಕೃತಿ ಇದು ಎಂದವನಿಗೆ ತಿಳಿಯದೆ ಹೋಗಲಿಲ್ಲ. ತಿಳಿದು ಹಿಂದಿನಂತೆ 'ನನ್ನ ವಾಣಿಯೂ ಹೀಗೆಯೇ ಕಾರ್ಯಕುಶಲೆಯಾಗಿದ್ದರೆ–' ಎಂದೆಂದುಕೊಳ್ಳುವ ಬದಲು ತಾನೆಂದೂ ನೋಡದ ಇಂದುವಿನ ರೂಪವನ್ನು ಕಲ್ಪಿಸತೊಡಗಿದ. ಅವನನ್ನು ಮೆಚ್ಚಿಸಬೇಕೆಂದು ಆ ದಿನ ವಾಣಿಯು ಆಡಿದ ಮಾತುಗಳೆಲ್ಲಾ ಅವನಿಗೆ ಬಲು ದೂರದಿಂದ ಕೇಳಿಸಿದಂತಿದ್ದುವು. ಅವನ ಅನನ್ಯಮನಸ್ಕತೆಯನ್ನು ಕಂಡು ವಾಣಿ 'ಬೆಳಗಿನಿಂದಲೂ ಊಟವಿಲ್ಲದೆ ಬಹಳ ದಣಿದಿರುವರು' ಎಂದು ಮನದಲ್ಲಿಯೇ ಹಲುಬಿದಳು. 'ಇನ್ನುಮುಂದೆಂದೂ ಹೀಗಾಗಗೊಡುವುದಿಲ್ಲ' ಎಂದು ಪ್ರತಿಜ್ಞೆಯನ್ನು ಮಾಡಿಕೊಂಡಳು. ಹಿಂದೆಷ್ಟೋ ಸಾರಿ ವಾಣಿ ಇದೇ ರೀತಿಯ ಪ್ರತಿಜ್ಞೆಗಳನ್ನು ಮಾಡಿಕೊಂಡಿದ್ದರೂ ಅವುಗಳೆಂದೂ ನೆರವೇರಿರಲಿಲ್ಲ. ಆದರೆ ಈ ಸಾರಿ ದಿನ ಬೆಳಗಾದರೆ ಇಂದು ಕೆಲಸಕ್ಕೆ ನೆರವಾಗುತ್ತಿದ್ದುದರಿಂದ ವಾಣಿಗೆ ಪ್ರತಿಜ್ಞಾಪಾಲನೆಯು ಕಷ್ಟವಾಗಿ ತೋರಲಿಲ್ಲ. ನಿಜವಾಗಿ ನೋಡಿದರೆ ಇಂದುವೇ ವಾಣಿಯ ಪ್ರತಿಜ್ಞೆಯನ್ನು ಪಾಲಿಸುವವಳಾಗಿದ್ದಳು.

೫

ಯೋಚನೆಗಳಿಗೆ ಎಡೆಕೊಡಬಾರದೆಂದು ಇಂದು ತನ್ನ ಹೆಚ್ಚಿನ ಸಮಯವನ್ನು ವಾಣಿಯ ಗೃಹಕೃತ್ಯಗಳಿಗಾಗಿ ಉಪಯೋಗಿಸತೊಡಗಿದಂದಿನಿಂದ ಅವರ ಗೃಹಕಾರ್ಯಗಳು ಸುಸೂತ್ರವಾಗಿ ನಡೆಯತೊಡಗಿದವು. ತನ್ನ ಮನೆಯಲ್ಲಾದ ಈ ಮಾರ್ಪಾಡನ್ನು ರತ್ನ ನೋಡದಿರಲಿಲ್ಲ. ನೋಡುತ್ತಿದ್ದಂತೆ ತಾನೆಂದೂ ನೋಡದಿದ್ದ ಇಂದುವಿನ ಕಾರ್ಯಕುಶಲತೆಗಾಗಿ ಅವನ ಮೆಚ್ಚಿಕೆಯೂ ಬೆಳೆಯದಿರಲಿಲ್ಲ. ಮನೆಯ ಪ್ರತಿಯೊಂದು ವಸ್ತುವಿನ ಸುವ್ಯವಸ್ಥಿತ ಸಿಸ್ತಿನಲ್ಲಿಯೂ ಅವನಿಗೆ ಇಂದುವಿನ ನೆನಪಾಗುತಿತ್ತು. ಅವಳನ್ನವನು ಪ್ರತ್ಯಕ್ಷವಾಗಿ ನೋಡಿರದಿದ್ದರೂ ಅವಳ ಕೆಲಸಗಳನ್ನು ನೋಡಿ ಅವಳ ಚಿತ್ರವನ್ನು ಕಲ್ಪಿಸಿಕೊಂಡಿದ್ದನು.

ಅವನ ಆ ಕಾಲ್ಪನಿಕ ಇಂದುವು ಆದರ್ಶ ಸ್ತ್ರೀಯಾಗಿದ್ದಳು. ಸುಯೋಗ್ಯ ಗೃಹಿಣಿಯಾಗಲು ಬೇಕಾದ ಎಲ್ಲಾ ಸುಗುಣಗಳೊಡನೆ ಅವಳಿಗೆ ಅಪೂರ್ವ ಸೌಂದರ್ಯವೂ ಇತ್ತು. ಆದರೆ ಅದೇಕೋ! ಇಷ್ಟೆಲ್ಲ ಸುಂದರವಾಗಿ ಚಿತ್ರಿಸಿದ ಆ ಇಂದುವಿನ ಮೋರೆಯಲ್ಲಿ ನಗುವಿಲ್ಲ–ಅವಳ ಕಣ್ಣುಗಳಲ್ಲಿ ಹಾಸ್ಯವಿಲ್ಲ. ಬಹುಶಃ ಯಾವಾಗಲೂ ನಗುನಗುತ್ತಿರುವ ವಾಣಿಯನ್ನು ನೋಡಿಕೊಂಡಿದ್ದುದರಿಂದಲೇನೋ! ಅವಳಿಗಿಂತ ಎಲ್ಲಾ ತರದಲ್ಲೂ ಬೇರೆಯಾದ ಇಂದುವಿನ ಮುಖದಲ್ಲಿ ನಗುವಿರಬಾರದೆಂದು ಹಾಗೆ ಚಿತ್ರಿಸಿರಬಹುದು.

ಮೊದಮೊದಲು ಅವಳ ಕೆಲಸಗಳನ್ನು ಮೆಚ್ಚಿ, ಇಷ್ಟೊಂದು ಕಾರ್ಯಕುಶಲೆಯಾದ ಇಂದು ಹೇಗಿರಬಹುದು ಎಂದು ಒಂದು ತರದ ಕುತೂಹಲದಿಂದ ಇಂದುವಿನ ಚಿತ್ರವನ್ನು ಮನದೊಳಗೇ ಚಿತ್ರಿಸತೊಡಗಿದ್ದ ರತ್ನನಿಗೆ ಬರಬರುತ್ತ ಅವಳನ್ನು ಯಾವಾಗಲೂ ಚಿತ್ರಿಸುವುದೇ ಒಂದು ಹವ್ಯಾಸವಾಗಿ ಹೋಯ್ತು. ಒಮ್ಮೊಮ್ಮೆ ತುಂಬ ಕೆಲಸದ ಮಧ್ಯದಲ್ಲೂ ಅವನಿಗೆ ಇಂದುವಿನ ಯೋಚನೆ ಬಂದುಬಿಡುತ್ತಿತ್ತು. ತಾನು ಯತ್ನಿಸದಿದ್ದರೂ ತಾನಾಗಿ ಮೂಡುವ ಅವಳ ಯೋಚನೆ, ರೂಪಗಳಿಗಾಗಿ ಅವನಿಗೇ ಆಶ್ಚರ್ಯವಾಗುತ್ತಿತ್ತು. ಇದೆಂಥಾ ಭ್ರಾಂತಿ! ಎಂದು ಸ್ವಲ್ಪ ಕೋಪವೂ ಬರುತ್ತಿತ್ತು. ಆದರಿವೆಲ್ಲಾ ವಾಣಿಯ ಪ್ರತಿಜ್ಞೆಗಳಂತೆ ಒಂದು ಸ್ವಲ್ಪ ಹೊತ್ತಿಗೆ ಮಾತ್ರವಷ್ಟೆ. ಇತರರ ಅಸಾಧ್ಯ ರೋಗಗಳನ್ನು ತನ್ನ ಔಷಧಿಗಳ ಬಲದಿಂದ ವಾಸಿಮಾಡುತ್ತಿದ್ದ ರತ್ನನಿಗೆ ಕೊನೆಕೊನೆಗೆ ಇಂದುವನ್ನು ಚಿತ್ರಿಸುವ ರೋಗದಿಂದ ಪಾರಾಗಲು ಅಸಾಧ್ಯವಾಗಿ ತೋರಿತು. ಏನೇನು ಮಾಡಿದರೂ ತನ್ನ ಮನೋರಾಜ್ಯದಿಂದ ಮಾಸದ ಇಂದುವಿನ ಕಾಲ್ಪನಿಕ ರೂಪವನ್ನು ಸಂಪೂರ್ಣವಾಗಿ ಉಜ್ಜಿಬಿಡಲು ಅವನಿಗೆ ಕೊನೆಗೆ ತೋರಿದ ಒಂದೇ ಒಂದು ಉಪಾಯವೆಂದರೆ ಅವಳನ್ನು ಪ್ರತ್ಯಕ್ಷವಾಗಿ ನೋಡಿಬಿಡುವುದು. ತಾನು ಚಿತ್ರಿಸಿದಷ್ಟು ಸುಂದರವಾಗಿರದ ಅವಳನ್ನು ಸ್ವತಃ ನೋಡಿದರೆ ತನ್ನ ಭ್ರಾಂತಿ ಮಾಸಬಹುದೆಂದು ಅವನಿಗೆ ತೋರಿತು.

ರತ್ನನಿಗೆ ಇಂದುವನ್ನು ಪ್ರತ್ಯಕ್ಷಮಾಡಿಕೊಳ್ಳುವುದೇನೂ ಕಷ್ಟದ ಮಾತಾಗಿರಲಿಲ್ಲ. ತಾನು ಮನೆಯಲ್ಲಿಲ್ಲದ ವೇಳೆಯಲ್ಲೆಲ್ಲಾ ಅವಳು ತನ್ನ ಮನೆಗೆ ಬರುವಳೆಂಬುದು ಅವನಿಗೆ ಗೊತ್ತಿದ್ದ ವಿಷಯ. ಅನಿರೀಕ್ಷಿತವಾಗಿ ತಾನು ಮನೆಗೆ ಬಂದುದಾದರೆ ಅವಳು ಕಾಣಸಿಕ್ಕುವಳೆಂದೂ ಅವನಿಗೆ ಗೊತ್ತು. ಅದೇ ಒಂದು ದಿನ ಸಾಯಂಕಾಲ ಮನೆಗೆ ಬರಲು ಹೊತ್ತಾಗುವದೆಂದು ಹೇಳಿ ಹೋದವನು ಮೂರು ಗಂಟೆ ಹೊಡೆಯುವ ಮೊದಲೇ ಮನೆಗೆ ಬಂದ. ತನ್ನೆಣಿಕೆಯಂತೆ ಇಂದುವು ಮನೆಯಲ್ಲಿರುವಳೆಂದು ಬಾಗಿಲಿಗೆ ಬರುವಾಗಲೇ ಒಳಗೆ ನಡೆಯುತ್ತಿದ್ದ ಸಂಭಾಷಣೆಯಿಂದ ಅವನಿಗೆ ತಿಳಿಯಿತು. ನಿಧಾನವಾಗಿ ಒಳಗೆ ಹೋದ.

ನಡುಮನೆಯ ಮೇಜಿನ ಮೇಲೆ ಬಿದ್ದಿದ್ದ ಒಂದು ಮೂಟೆ ಅವನ ಬಟ್ಟೆಗಳನ್ನು ಇಸ್ತ್ರಿಮಾಡಿ ಮಡಿಸಿಡುತ್ತಾ ಬಾಗಿಲಿಗೆ ಬೆನ್ನುಹಾಕಿ ನಿಂತಿದ್ದಳು ಇಂದು. ವಾಣಿ ಅದೇ ಮೇಜಿನ ಒಂದು ಕೊನೆಯಲ್ಲಿ ಕಾಲುಗಳನ್ನಿಳಿಬಿಟ್ಟುಕೊಂಡು ಕುಳಿತು ಮಾತಿನ ಸಂಭ್ರಮದಲ್ಲಿ ಮೈಮರೆತಿದ್ದಳು.

ಬಾಗಿಲ ಹತ್ತಿರವೇ ಐದಾರು ನಿಮಿಷಗಳಿಂದ ರತ್ನ ನಿಂತಿದ್ದರೂ ಇಬ್ಬರಿಗೂ ಅವನು ಬಂದುದು ತಿಳಿಯಲಿಲ್ಲ. ರತ್ನ ಮಾತಿನ ಮಳೆ ಸುರಿಸುತ್ತಿದ್ದ ತನ್ನ ಹೆಂಡತಿಯನ್ನೂ, ಕೆಲಸದಲ್ಲಿ ಮುಳುಗಿದ್ದರೂ ಅವಳಿಗೆ ಸಮಯೋಚಿತವಾದ ಉತ್ತರಗಳನ್ನು ಹೇಳುತ್ತಿದ್ದ ಇಂದುವನ್ನೂ ಜೊತೆಯಾಗಿ ನೋಡಿದ. ಅವರಿಬ್ಬರೊಳಗಿನ ಅಜಗಜಾಂತರ ವ್ಯತ್ಯಾಸವನ್ನೂ ನೋಡಿ ಇಂದುವಿನ ಚಿತ್ರವನ್ನು ಸಂಪೂರ್ಣವಾಗಿ ಉಜ್ಜಿಬಿಡಬೇಕೆಂದು ಬಂದಿದ್ದವನು ಹೊಸದಾಗಿ ಚಿತ್ರಿಸತೊಡಗಿದ. ಹೌದು, ಅವನ ಕಾಲ್ಪನಿಕ ಇಂದುವಿನ ಅಪ್ರತಿಮ ಸೌಂದರ್ಯವು ನಿಜವಾದ ಇಂದುಗಿಲ್ಲದಿದ್ದರೂ ಅವಳ ಕಾರ್ಯತತ್ಪರತೆಯು ಆ ಕಮ್ಮಿಯನ್ನು ತುಂಬಿಕೊಟ್ಟಿತು. ಐದು, ಹತ್ತು, ಹದಿನೈದು ನಿಮಿಷಗಳಾದರೂ ರತ್ನ ನಿಂತಲ್ಲಿಂದ ಕದಲಲಿಲ್ಲ. ಈ ಮಧ್ಯೆ ವಾಣಿ ಅದೇಕೋ ಬಾಗಿಲ ಕಡೆ ತಿರುಗಿದವಳು ರತ್ನನನ್ನು ನೋಡಿ— 'ಏನು ಇಷ್ಟೊಂದು ಬೇಗ? ಸಿನಿಮಾಕ್ಕೋಗೋದಕ್ಕೋ. .' ಎಂದು ಮೇಜಿನಿಂದ ಕೆಳಗಿಳಿದಳು. ಆಗಲೇ ಇಂದುವಿಗೂ ರತ್ನ ಬಂದುದರ

ಅರಿವಾದುದು. ಆತನ ಆಕಸ್ಮಿಕ ಬರುವಿನಿಂದ ಅಪ್ರತಿಭಳಾದ ಅವಳು ಫಕ್ಕನೆ ಇಸ್ತ್ರಿ ಪೆಟ್ಟಿಗೆಯನ್ನು ಕೆಳಗಿಟ್ಟು ತಿರುಗಿದಳು. ಸರಿ, ರತ್ನನ ಚಿತ್ರದಲ್ಲಿ ಬಾಕಿ ಉಳಿದಿದ್ದ ಮುಖವೂ ಪೂರ್ಣವಾಯ್ತು.

ತಿರುಗಿದ ಇಂದು ಎವೆಯಿಕ್ಕದೆ ತನ್ನ ಮುಖನೋಡುತ್ತಿದ್ದ ರತ್ನನನ್ನು ನೋಡಿ ಸಂಕೋಚದಿಂದ ಮಾಡುವ ಕೆಲಸವನ್ನು ಅಷ್ಟಕ್ಕೇ ಬಿಟ್ಟು ಹಿತ್ತಲಬಾಗಿಲಿಗಾಗಿ ತನ್ನ ಮನೆಗೆ ನಡೆದು ಬಿಟ್ಟಳು. ರತ್ನ ತನ್ನನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗುವ ಸಲುವಾಗಿ ಬೇಗ ಬಂದಿರುವನೆಂದೆಣಿಸಿದ ವಾಣಿ ಅವನೊಡನೆ ಪ್ರಶ್ನೆ ಕೇಳುವ ಸಂಭ್ರಮದಲ್ಲಿ ಅವಳನ್ನು ತಡೆಯಲೂ ಇಲ್ಲ.

ಮತ್ತೆ ಒಂದೂವರೆ ಗಂಟೆಯ ತರುವಾಯ ವಾಣಿ ಇಂದುವನ್ನೂ ತಮ್ಮೊಡನೆ ಸಿನಿಮಾಕ್ಕೆ ಕರೆದುಕೊಂಡು ಹೋಗುವ ಸಲುವಾಗಿ ಅವಳ ಮನೆಗೆ ಹೋದಾಗ ಇಂದು ತಲೆನೋವೆಂದು ಮಲಗಿದ್ದಳು. ವಾಣಿ 'ಸಿನಿಮಾಕ್ಕೆ ಬಾ' ಎಂದು ಮಾಡಿದ ಬಲವಂತವೆಲ್ಲವೂ ವ್ಯರ್ಥವಾಯ್ತು. ನಿಜಕ್ಕೂ ಅವಳಿಗೆ ತಲೆನೋವಿದ್ದುದೇನೋ ಹೌದು. ಆದರೆ ಆ ತಲೆನೋವು ಬರಲು ಕಾರಣ ಬಗೆಹರಿಯದಿದ್ದೊಂದು ಸಮಸ್ಯೆ ಎಂದು ಮಾತ್ರ ವಾಣಿಗೆ ತಿಳಿಯಲಿಲ್ಲ. ತಿಳಿದಿದ್ದರವಳು ಸಿನಿಮಾಕ್ಕೆಂದು ಹೊರಟು ನಿಂತಿದ್ದ ರತ್ನನನ್ನು ಇಂದುವಿನ ಮನೆಗೆ ಕರತರುತ್ತಿರಲಿಲ್ಲ

ಸಿನಿಮಾವನ್ನು ನೋಡಿಯಾದರೂ ಇಂದುವಿನ ಚಿತ್ರವು ಅಳಿಸಿಹೋಗಬಹುದೆಂದು ರತ್ನ ವಾಣಿಯ ಇಚ್ಛೆಯಂತೆ ಸಿನಿಮಾಕ್ಕೆ ಹೊರಟಿದ್ದ. ಆದರೆ ಅಷ್ಟಕ್ಕೇ ಹುಡುಗಾಟಿಕೆಯ ವಾಣಿ ಸುಮ್ಮನಾಗದೆ 'ಇಂದುವನ್ನೂ ಕರೆದುಕೊಂಡು ಹೋಗೋಣ' ಎಂದು ರತ್ನ ನಿರೋಧಿಸುತ್ತಿದ್ದಂತೆಯೇ ಇಂದುವನ್ನು ಕರೆದುಕೊಂಡು ಬರಲು ಓಡಿದಳು. ವಾಣಿ ಹಿಂತಿರುಗುವಾಗ ಇಂದು ಅವಳ ಜೊತೆಯಲ್ಲಿಲ್ಲದುದನ್ನು ನೋಡಿ ರತ್ನನಿಗೆ ಸಮಾಧಾನವಾಯ್ತು. ಆದರೆ ವಾಣಿ ಬಂದು 'ಇಂದುವನ್ನು ಸ್ವಲ್ಪ ನೋಡಿ ಔಷಧಿ ಮಾಡಿ ಕೊಡಿ' ಎನ್ನುವಾಗ ಅವನಿಗೆ ವಾಣಿಯ ಹುಡುಗಾಟಿಕೆಗಾಗಿ ಕೋಪಬಂತು. 'ಸ್ವಲ್ಪ ತಲೆ ನೋವಾದ್ರೆ ಏನ್ಮಹಾ!

ಕಂ ಬ ನಿ

ಒಂದು ಏಸ್ಪರಿನ್ ಮಾತ್ರೆ ಕೊಟ್ಟು ಬೇಗ ಬಾ–ಹೊತ್ತಾಗಿ ಹೋಗುತ್ತೆ' ಎಂದು ಸ್ವಲ್ಪ ಒರಟಾಗಿಯೇ ಹೇಳಿದ. ಬೇರೆ ಸಮಯದಲ್ಲಾಗಿದ್ದರೆ ಇಂದುವನ್ನು ನೋಡಿ ಔಷಧಿಕೊಡಲು ಅವನಿಗೆ ಯಾವ ಅಭ್ಯಂತರವೂ ಇರುತ್ತಿರಲಿಲ್ಲ. ದಿನ ಬೆಳಗಾದರೆ ನೋಡುವ ಇತರ ರೋಗಿಗಳ ಗುಂಪಿಗೆ ಅವಳು ಸೇರಿಹೋಗುತ್ತಿದ್ದಳು.

ಆದರೆ ಆಗ, ಇಂದುವನ್ನು ಮರೆಯಬೇಕೆಂದು ಯತ್ನಿಸುತ್ತಿರುವಾಗ, ಅವಳ ಮನೆಗೇ ಹೋಗಿ ಔಷಧಿ ಮಾಡಿಕೊಡಬೇಕೆಂದು ಬಲಸಂತಪಡಿಸುವ ವಾಣಿಯ ಮಾತುಗಳು ಅವನಿಗೆ ಅಸಹ್ಯವಾಗಿದ್ದವು. ಇದು ಸರಳವಾಣಿಯ ಹುಡುಗಾಟಿಕೆಯ ಬುದ್ಧಿಗೆ ತಿಳಿಯುವುದು ಹೇಗೆ? ಒಂದೇಸವನೆ ಹಠಮಾಡಿ ಕೊನೆಗೂ ರತ್ನನನ್ನು ಇಂದುವಿನ ಮನೆಗೆ ಎಳೆದೊಯ್ದಳು.

ಒಂದೇ ದಿನದಲ್ಲಿ, ಕೆಲವೇ ಗಂಟೆಗಳ ಅಂತರದಲ್ಲಿ, ಅದೂ ಅವಳ ಮನೆಯಲ್ಲೇ ರೋಗಿಯ ಅವಸ್ಥೆಯಲ್ಲಿ ಇಂದುವನ್ನು ಪುನಃ ನೋಡುವ ಪ್ರಸಂಗವು ಬರಬಹುದೆಂದು ರತ್ನ ಎಂದೂ ಯೋಚಿಸಿರಲಿಲ್ಲ. ಅದರಲ್ಲೂ ತಾನು ಇನ್ನೊಮ್ಮೆ ನೋಡುವಾಗ ಅವಳಳುವುದನ್ನು ನೋಡಬಹುದು ಎಂಬುದು ಅವನು ಕನಸಿನಲ್ಲಿ ಸಹ ಊಹಿಸದ ಮಾತು. ಹೌದು; ಇಂದು ಅಳುತ್ತಿದ್ದಳು–ಬಿಕ್ಕಿ ಬಿಕ್ಕಿ ಚಿಕ್ಕಮಕ್ಕಳಂತೆ ಅಳುತ್ತಿದ್ದಳು. ತಲೆನೋವಿನ ಬಾಧೆಗಾಗಿ ತಾನಳುವುದಲ್ಲವೆಂದು ಗೊತ್ತಿದ್ದರೂ, ಅಳುವ ಕಾರಣವು ಏನೆಂದು ಅವಳಿಗೇ ತಿಳಿಯದಷ್ಟು ಸೂಕ್ಷ್ಮವಾಗಿತ್ತು.

ವಾಣಿ ಮೊದಲನೆಯ ಸಾರಿ ಬಂದುಹೋದ ತರುವಾಯ ಅವಳ ಅಳು ಸುರುವಾಗಿತ್ತು. ತಾನತ್ತರೂ–ಸತ್ತರೂ ಬಂದು ನೋಡುವವರು ಯಾರೂ ಇಲ್ಲವೆಂಬ ಧೈರ್ಯದಿಂದಲೇ ಅಳುವೂ ನಿರಾತಂಕವಾಗಿ ಸಾಗಿತ್ತು. ಅವಳೆಣಿಸಿದಂತೆ ವಾಣಿ ಸಿನಿಮಾಕ್ಕೆ ಹೋಗದೆ ರತ್ನನನ್ನು ತಮ್ಮನೆಗೆ ಕರೆದುಕೊಂಡು ಬರುವಳೆಂದು ಅವಳಿಗೆ ಹೇಗೆ ಗೊತ್ತಾಗಬೇಕು?

ಅವಳಳುವಿಗೆ ವಾಣಿ ರತ್ನ ಇಬ್ಬರಿಗೂ ತೋರಿದ ಒಂದೇ ಒಂದು

ಕಾರಣ ಅವಳ ಅಸಾಧ್ಯವಾದ ತಲೆನೋವು. ಎಷ್ಟು ಆಕಸ್ಮಾತ್ತಾಗಿ ಇಂದುವಿನ ಅಳುವು ಸುರುವಾಗಿತ್ತೋ ಅಷ್ಟೇ ಬೇಗನೆ ರತ್ನ ವಾಣಿಯರನ್ನು ನೋಡಿ ನಿಂತುಹೋಯಿತು. ಚಿಕ್ಕ ಮಕ್ಕಳಂತೆ ತಾನಳುವುದನ್ನು ಅವರು ನೋಡಿಬಿಟ್ಟರಲ್ಲಾ ಎಂದು ಅವಳು ಭೂಮಿಗಿಳಿದು ಹೋದಳು. ಮತ್ತೆ ತನಗೆ ಹೇಳದೆಯೇ ವಾಣಿ ರತ್ನನನ್ನು ಕರೆದುಕೊಂಡು ಬಂದಳಲ್ಲಾ ಎಂದು ಬೇರೆ. ರತ್ನನಿಗೂ ಹಾಗೆಯೇ. ಇಂದು—ಅಳುತ್ತಿರುವ ಇಂದುವನ್ನು ನೋಡಿ ಮನಸ್ಸಿನ ಬೇರೆಲ್ಲಾ ಯೋಚನೆಗಳೂ ಮಾಯವಾಗಿ, ಚಿಕ್ಕಮಕ್ಕಳನ್ನು ಸಂತೈಸುವಂತೆ ಅವಳನ್ನೂ ಸಂತೈಸಿ ಸಮಾಧಾನ ಪಡಿಸಬೇಕೆಂದು ತೋರಿತು. ಆದರೆ ಪಕ್ಕದಲ್ಲೇ ನಿಂತಿದ್ದ ವಾಣಿಯೂ ಅವನ ನಾಲ್ಕಾರು ವರ್ಷಗಳ ರೋಗಿಗಳನ್ನು ನೋಡಿದ ಅಭ್ಯಾಸಬಲವೂ ಅವನನ್ನು ಬದುಕಿಸಿದುವು. ಮನದೊಳಗೆ ಯೋಚನೆಗಳ ಯುದ್ಧವೇ ನಡೆಯುತ್ತಿದ್ದರೂ ಹೊರಗೆ ಗಂಭೀರವಾಗಿ ಅವಳ ತಲೆ ಮುಟ್ಟಿ ನೋಡಿದ. ಮತ್ತೆ ವಾಣಿಯ ಕಡೆ ತಿರುಗಿ 'ಜ್ವರವೂ ಇದೆ' ಎಂದ. ಅದಕ್ಕೆ ವಾಣಿ 'ನೀವು ಔಷಧಿ ಮಾಡಿಕೊಟ್ಟು ಸಿನಿಮಾಕ್ಕೆ ಹೋಗಿ; ನಾನಿಲ್ಲೇ ಇರುತ್ತೇನೆ' ಎಂದು ಇಂದುವಿನ ನಿರೋಧವನ್ನು ಮೂಲೆಗೊತ್ತಿ ಅಲ್ಲೇ ಕುಳಿತುಬಿಟ್ಟಳು. ರತ್ನ ಒಬ್ಬನೇ ಸಿನಿಮಾಕ್ಕೆ ಹೋದ. ಆದರೆ ಆ ದಿನ ರಾತ್ರಿ ವಾಣಿ 'ನೀವು ನೋಡಿದ ಚಿತ್ರ ಯಾವುದು?' ಎಂದು ಕೇಳಿದ್ದರೆ 'ಅಳುತ್ತಿದ್ದ ಇಂದುವಿನ ಮುಖ' ಎಂದವನು ಹೇಳಬೇಕಾಗುತ್ತಿತ್ತು.

## ೬

ಅಂದಿನ ತಲೆನೋವು ಇಂದು ರತ್ನರ ಪರಿಚಯಕ್ಕೆ ಅಡಿಗಲ್ಲಾಯಿತು. ಮೊದಮೊದಲು ರತ್ನನಿದಿರು ಹೋಗಲು ನಾಚುತ್ತಿದ್ದ ಇಂದು ಈಗವನೊಡನೆ ನಿಸ್ಸಂಕೋಚವಾಗಿ ಮಾತಾಡುತ್ತಿದ್ದಳು. ಅವರಿಬ್ಬರೊಡನೆ ಸಿನಿಮಾಕ್ಕೆ ಹೋಗುವುದು ಸಹ ಅವಳ ಕಾರ್ಯಕ್ರಮಗಳಲ್ಲಿ ಸೇರಿ ಹೋಯಿತು. ಹೀಗೆ ನೆರೆಮನೆಯ ಒಕ್ಕಲು ಬಂದು ಆರು ತಿಂಗಳು

ತುಂಬುವ ಮೊದಲು ಇಂದುವಿನ ಏಕಾಂತ ಜೀವನ ಸಂಪೂರ್ಣ ಬದಲಾಯಿತು. ಬದಲಾಯಿತು ಅಷ್ಟೆ—

ಅದರಿಂದವಳಿಗೆ ಹೆಚ್ಚಿನ ಶಾಂತಿ ಯಾ ಸುಖದೊರೆಯಿತೆಂದರೆ ತಪ್ಪಾಗುವುದು. ಆ ಮನೆಗೆ ಮೊದಲು ಬಂದಾಗಿದ್ದ ತನ್ನಮನೆ, ತಾನು, ಸ್ವಸಂತ್ರವಾಗಿ ಸುಖವಾಗಿದ್ದೇನೆ ಎಂಬ ಅಭಿಮಾನವೂ ತೃಪ್ತಿಯೂ ಈಗಿರಲಿಲ್ಲ. ಅಷ್ಟರಲ್ಲೇ ನಾನು ಸುಖವಾಗಿದ್ದೇನೆ—ಇರಬಲ್ಲೆ ಎಂದಿದ್ದ ಅವಳ ಭಾವನೆಯು ವಾಣಿ ರತ್ನರ ಸಂಸಾರವನ್ನು ನೋಡಿದಂದಿನಿಂದ ತನ್ನ ಜೀವನದಲ್ಲೂ ಒಂದು ದೊಡ್ಡ ಅಭಾವವಿದೆ ಎಂಬುದನ್ನು ಕಂಡುಕೊಂಡಿತ್ತು. ಮೊದಲು ಬಲು ಅಸ್ಪಷ್ಟವಾಗಿ ಮೊಳೆತ ಈ ಭಾವನೆಯು ವಾಣಿ ರತ್ನರಲ್ಲಿ ಹೆಚ್ಚಿನ ಬಳಕೆಯಾದಂತೆಲ್ಲಾ ಚಿಗುರುತ್ತಲೇ ಇತ್ತು. ಮತ್ತೆ ರತ್ನನೂ ಸದಾ ಇವಳನ್ನು ಯೋಚಿಸುತ್ತಿದ್ದುದರಿಂದಲೇನೋ! ಅವಳ ಮನವು ಇಚ್ಛೆಗೆ ವಿರೋಧವಾಗಿ ರತ್ನನ ಕಡೆ ಒಲಿಯತೊಡಗಿತು.

ಇಂದು ರತ್ನರ ಮನಸ್ಸಿನಲ್ಲಿ ಒಬ್ಬರದೊಬ್ಬರಿಗೆ ತಿಳಿಯದಂತೆ ಈ ರೀತಿಯ ಭಾವನೆಗಳು ಮೂಡಿ ಮೊಳೆಯುತ್ತಿದ್ದಾಗ, ವಾಣಿಗೆ ಅಕಸ್ಮಾತ್ತಾಗಿ ತೌರುಮನೆಗೆ ಹೋಗುವ ಪ್ರಸಂಗ ಬಂದಿತು. ಬೇಸಿಗೆಯಲ್ಲಿ ಒಂದು ತಿಂಗಳು ರಜಾಪಡೆದು ಗಂಡಹೆಂಡಿರಿಬ್ಬರೂ ಜೊತೆಯಾಗಿ ಹೋಗುವುದೆಂದು ಮೊದಲೇ ನಿಶ್ಚಯವಾಗಿತ್ತು. ಆದರೆ ಅನಿರೀಕ್ಷಿತವಾಗಿ ಅವಳ ತಾಯಿಗೆ ಖಾಯಿಲೆ ಎಂದು ಅವಳಣ್ಣ ಅವಳನ್ನು ಕರೆದುಕೊಂಡು ಹೋಗಲು ಬಂದುಬಿಟ್ಟ. ರತ್ನನಿಗೆ ಆಗ ರಜಾ ಸಿಕ್ಕುವಂತಿರಲಿಲ್ಲ. ಆದುದರಿಂದ ವಾಣಿಯೊಬ್ಬಳೇ ಅಣ್ಣನೊಡನೆ ಹೊರಟುಹೋದಳು.

ಹುಚ್ಚು ಹುಡುಗಿ! ಹೋಗುವಾಗ ಇಂದುವಿನೊಡನೆ 'ಇಂದೂ, ಅಮ್ಮನಿಗೆ ಕಾಯಿಲೆ; ವಾಸಿಯಾದೊಡನೆಯೇ ಬಂದುಬಿಡುತ್ತೇನೆ. ನಾನು ಬರುವ ತನಕ ಸ್ವಲ್ಪ ನಮ್ಮನೆಕಡೆ ನೋಡಿಕೋ' ಎಂದಳು. ರತ್ನನೂ ಅಲ್ಲೇ ನಿಂತಿದ್ದ. ಇಂದು ಬೇರೇನೂ ಹೇಳಲಾರದೆ 'ಹೂಂ' ಎಂದಳು. ಆದರೆ ವಾಣಿಯೊಡನೆ 'ಹೂಂ' ಎಂದುದೆಷ್ಟೋ ಅಷ್ಟೇ—ಅವಳು ಹೊರಟು ಹೋದ ತರುವಾಯ ಇಂದು ಆ ಕಡೆ ಹೋಗಲಿಲ್ಲ. ಅವಳು ಸ್ವಭಾವತಃ

ಪಾಪಭೀರು. ಸಮಾಜದ ಕಟ್ಟು-ಕಟ್ಟಲೆಗಳನ್ನೇ ದೇವರ ನಿಯಮಗಳು ಎಂದು ತಿಳಿದು ಬೆಳೆದವಳು. ಅವಳಿಗೆ ತನ್ನೊಲವು ರತ್ನನ ಕಡೆ ತಿರುಗಿದೆ ಎಂಬುದರ ಅರಿವು ಆದಾಗಲೇ ಬಹಳ ಭಯವಾಯಿತು. ವಾಣಿ ಹೊರಟು ಹೋದ ಮೇಲಂತೂ ಅವಳ ಭಯವು ಒಂದಕ್ಕೆ ಹತ್ತಾಗಿ ಬೆಳೆಯತೊಡ ಗಿತು. ತನ್ನ ಶಾಂತ ಜೀವನ ಪ್ರವಾಹವನ್ನು ಕಲಕಿ ಕದಡಿಸುವ ಯೋಚನೆ ಗಳಿಗೆ ಹೃದಯದಲ್ಲೆಡೆ ಕೊಟ್ಟೆ ಹೇಗೆ? ಏಕೆ? ಎಂಬ ಪ್ರಶ್ನೆಗಳು ಸದಾ ಅವಳನ್ನು ಬಾಧಿಸತೊಡಗಿದವು. ಆದರೆ ಈ ಯೋಚನೆಗಳ ಜೊತೆಯಲ್ಲೇ ರತ್ನನ ಮೂರ್ತಿಯೂ ಅವಳ ಹೃದಯದಲ್ಲಿ ಮೂಡಿಹೋಗಿತ್ತು. ವಾಣಿಯ ಪತಿಯನ್ನು ತಾನು ಪ್ರೀತಿಸುವುದು ಅನುಚಿತ ಎಂಬುದು ಅವಳಿಗೆ ತಿಳಿದಿದ್ದರೂ ಆ ವಿಷಯದಲ್ಲವಳು ಏನೂ ಮಾಡಲಾರದವಳಾಗಿದ್ದಳು. ಅವನನ್ನು ಪ್ರೀತಿಸದಿರುವುದು ಅವಳ ಶಕ್ತಿಗೆ ಮೀರಿದ ಮಾತಾಗಿತ್ತು. ತನ್ನ ಈ ಅನುಚಿತ ಪ್ರೇಮವು ರತ್ನನಿಗೆಲ್ಲಿ ತಿಳಿದು ಬಿಡುವುದೋ ಎಂಬ ಭಯದಿಂದಲೇ ಅವಳು ವಾಣಿ ಹೊರಟು ಹೋದ ತರುವಾಯ ಆ ಕಡೆ ಸಹ ಹೋಗಲಿಲ್ಲ. ಹಿತ್ತಲಲ್ಲಿದ್ದ ಹೂಗಿಡಗಳ ಆರೈಕೆ ಮಾಡುವುದು ಸಹಾ ನಿಂತು ಹೋಯಿತು. ತಾನಲ್ಲಿದ್ದಾಗ ನೆರೆಮನೆಯ ಹಿತ್ತಲಲ್ಲಿ ರತ್ನನ ಭೇಟಿಯಾಗಬಹುದೆಂಬ ಭಯವೇ ಇದಕ್ಕೆ ಕಾರಣ.

ಈಗಂತೂ ಹೋಗದ ಹೊತ್ತನ್ನು ಕೊಲ್ಲುವುದಕ್ಕೆ ಇಂದುವಿಗುಳಿದ ಒಂದೇ ಒಂದು ಸಾಧನ: ಭಾವನಾಪ್ರಪಂಚದಲ್ಲಿ ಹಗಲು ಕನಸುಗಳನ್ನು ಹೆಣೆಯುವುದು; ಎಷ್ಟಾದರೂ ಇವೆಲ್ಲಾ ಕನಸುಗಳೇ ಎಂದು ಕಣ್ಣೀರು ತಂದುಕೊಳ್ಳುವುದು.

ವಾಣಿ ಇದ್ದಾಗ ಪ್ರತಿದಿನ ಇಂದುವನ್ನು ನೋಡುತ್ತಿದ್ದ ರತ್ನನಿಗೆ ಈಗವರಿಬ್ಬರೂ ಜೊತೆಯಾಗಿ ಇಲ್ಲದಂತಾದುದರಿಂದ ತುಂಬಾ ಬೇಸರ ವಾಯಿತು. ದಿನಾ ಇಂದು ಅವರ ಮನೆಗೆ ಹೋಗುತ್ತಿದ್ದಾಗ ಸ್ವಲ್ಪ ಸ್ವಲ್ಪವಾಗಿ ಅವನ ಹೃದಯವನ್ನಾಕ್ರಮಿಸಿದ್ದರ ಅರಿವು ಅವನಿಗಾದುದು ಅವಳು ಒಮ್ಮೆಗೇ ಆ ಕಡೆ ಹೋಗುವುದನ್ನು ನಿಲ್ಲಿಸಿದಾಗ. ಆಗ ಅವನಿಗೂ

ಅವಳು ತವರ್ಮನೆಗೆ ಬರದಿರುವುದು ಒಳ್ಳೆಯದಾಯಿತು ಎಂದು ತೋರಿದರೂ ಚಪಲಮನಸ್ಸು ಮಾತ್ರ ಅವನ ದರ್ಶನಕ್ಕೆ ತವಕಿಸುತ್ತಿತ್ತು.

ವಾಣಿ ಹೊರಟುಹೋದ ಮೇಲವನಿಗೆ ಹೋಟೆಲಿನಲ್ಲಿ ಊಟ; ಕ್ಲಬ್ಬಿನಲ್ಲಿ ವಾಸ. ಮನೆಗೆ ಬರಬೇಕಾದರೆ ಬಟ್ಟೆ ಬದಲಾಯಿಸುವುದಕ್ಕೆ, ಮತ್ತೆ ರಾತ್ರಿ ನಿದ್ರೆಮಾಡುವುದಕ್ಕೆ ಅಷ್ಟೆ. ಕ್ಲಬ್ಬಿನಿಂದ ಕೊನೆಯ ವ್ಯಕ್ತಿ ಹೋಗುವ ತನಕವೂ ಅವನಲ್ಲೇ ಇರುತ್ತಿದ್ದ. ಮತ್ತೆ ಹೋಟೆಲಿಗೆ ಹೋಗಿ ಊಟ ಮಾಡಿ ಮನೆ ತಲಪಬೇಕಾದರೆ ಹನ್ನೊಂದು ಗಂಟೆ ಹೊಡೆದುಹೋಗುತ್ತಿತ್ತು. ಆದರೂ ಹಗಲೆಲ್ಲಾದರೂ ಮನೆಗೆ ಬಂದರೆ ಹಿತ್ತಲ ಕಡೆ ಹೋಗಿ ಇಂದು ಎಲ್ಲಾದರೂ ಇರುವಳೋ ಎಂದು ನೋಡ ದಿರುತ್ತಿರಲಿಲ್ಲ.

ವಾಣಿ ಹೋಗಿ ಎರಡು ತಿಂಗಳುಗಳಾಗಿದ್ದರೂ ಸದ್ಯದಲ್ಲೇ ಬರುವ ಸೂಚನೆ ಏನೂ ಇರಲಿಲ್ಲ. ಒಂದು ದಿನ ಬೆಳಗ್ಗೆ ಇಂದು ನೀರು ಸೇದು ತ್ತಿರುವಾಗ ರತ್ನ ಹಿತ್ತಲಬೇಲಿಯ ಹತ್ತಿರ ಬಂದ. ವಾಣಿ ಹೊರಟು ಹೋದ ಮೇಲೆ ಅದೇ ಅವರು ಮೊದಲ ಸಾರಿ ಒಬ್ಬರನ್ನೊಬ್ಬರು ನೋಡಿದ್ದು. ಅವಳಿರುವಾಗ ನಿಸ್ಸಂಕೋಚವಾಗಿ ಮಾತಾಡಿಕೊಂಡಿದ್ದ ಅವರಿಗೆ ಆಗ ಮಾತಾಡಲು ಏನೂ ತೋರಲಿಲ್ಲ. ಆದರೂ ಇಂದು ತಾನು ಸುಮ್ಮನಿದ್ದರೆ ಮನದ ಭಾವನೆಗಳೆಲ್ಲಿ ಬಯಲಾಗುವುದೋ ಎಂಬ ಭಯ ದಿಂದ—'ವಾಣಿ ಯಾವತ್ತು ಬರ್ತಾಳೆ?' ಎಂದು ಕೇಳಿದಳು. ಅವಳ ಆ ಪ್ರಶ್ನೆಗೆ ಪ್ರತ್ಯುತ್ತರ ಕೊಡುವ ಬದಲು ರತ್ನ 'ಆರೋಗ್ಯವಾಗಿರುವೆಯಾ ಇಂದಿರಾ? ಇದೇನು ಇತ್ತೀಚೆಗೆ ನಿನ್ನನ್ನು ಕಾಣುವುದಿಲ್ಲ?' ಎಂದು ಕೇಳಿದ.

ಅದೇ ಮೊದಲವಳು ಅವನ ಬಾಯಿಂದ ತನ್ನ ಹೆಸರನ್ನು ಕೇಳಿದ್ದು. ಅಂದಿನವರೆಗೂ ಅವಳಿಗೆ ತನ್ನ ಹೆಸರು ಅಷ್ಟೊಂದು ಸುಂದರವೆಂದು ತಿಳಿದಿರಲಿಲ್ಲ.

ರತ್ನನ ಬಾಯಿಂದ ಹೊರಟ ಮಾತ್ರಕ್ಕೆ ತನ್ನ ಹೆಸರಿನಲ್ಲಾದ ಒಪ ಲಾವಣೆಯು ಅವಳ ಮುಖವನ್ನರಳಿಸಿತು. ಕಣ್ಣುಗಳು ಹೃದಯದ ಗುಟ್ಟುಗಳನ್ನೆಲ್ಲಾ ಹೊರಗೆಡವಿ ಅವನ ಮುಖವನ್ನು ನೋಡಿದವು. ರತ್ನನ ಕಣ್ಣುಗಳೂ ಮನದ ಭಾವನೆಗಳನ್ನು ಮುಚ್ಚಿಟ್ಟುಕೊಂಡಿರಲಿಲ್ಲ. ಅವನ ಆ ನೋಟವೇ ಭೂಮಿಯಿಂದ ಮೇಲಕ್ಕೆ—ಬಹು ಮೇಲಕ್ಕೆ ಹೋಗಿದ್ದ ಇಂದುವನ್ನು ಧರೆಗಿಳಿಸಿ ಮರೆತಿದ್ದ ಕರ್ತವ್ಯವನ್ನು ಜಾಗೃತಗೊಳಿಸಿದ್ದು. ಮರುಕ್ಷಣ ಸೇದಿದ್ದ ನೀರನ್ನು ಸಹ ತೆಗೆದುಕೊಳ್ಳದೆ ಒಳಗೆ ಹೋಗಿ ಬಿಟ್ಟಳು. ರತ್ನ ಬಹಳ ಹೊತ್ತು ಅಲ್ಲೇ ನಿಂತಿದ್ದರೂ ಪುನಃ ಅವಳು ಹೊರಗೆ ಬರಲಿಲ್ಲ.

ಮರುದಿನ, ಮರುದಿನ, ಮರುದಿನವೆಂದು ಮೂರು ದಿನ ರತ್ನ ಇಂದುವನ್ನು ನಿರೀಕ್ಷಿಸಿದರೂ ಅವಳ ದರ್ಶನವಾಗಲಿಲ್ಲ. ನಾಲ್ಕನೆಯ ದಿನ ಟಪ್ಪಾಲು ಮೂಲಕ ಇಂದುಗೊಂದು ಕಾಗದ ಬಂತು. ರತ್ನನ ಅಕ್ಷರಗಳ ಪರಿಚಯವಿದ್ದ ಅವಳಿಗದು ಅವನದೆಂದು ನೋಡಿದೊಡನೆಯೇ ತಿಳಿಯಿತು. ತಿಳಿದು ಬಹಳ ಹೊತ್ತು ಒಡೆಯದೆ ಅದನ್ನು ಕೈಯ್ಯಲ್ಲಿ ಹಿಡಿದುಕೊಂಡು ಆಲೋಚಿಸುತ್ತ ಕುಳಿತಿದ್ದಳು. ಮತ್ತವಳು ಬಹುಹೊತ್ತಿನ ಮೇಲೆ ಅಲ್ಲಿಂದೇಳುವಾಗಲೂ ಅದು ಒಡೆಯಲ್ಪಟ್ಟಿರಲಿಲ್ಲ; ಆದರೆ ಅವಳ ಕಣ್ಣೀರಿನಿಂದ ಅಭಿಷಿಕ್ತವಾಗಿ ಒದ್ದೆಯಾಗಿಹೋಗಿತ್ತು. ಎದ್ದವಳು ಹಾಗೆಯೇ ಆ ಕಾಗದವನ್ನು ಹಿಡಿದುಕೊಂಡು ಅಡಿಗೆ-ಮನೆಗೆ ಹೋದಳು. ಮತ್ತೊಂದು ನಿಮಿಷದಲ್ಲಿ ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯಲ್ಲದು ಬೂದಿಯಾಗಿ ಹೋಯ್ತು—



ಮತ್ತೊಂದು ವಾರದ ತರುವಾಯ ವಾಣಿ ತೌರುಮನೆಯಿಂದ ಬಂದಳು. ಬಂದವಳು ನೇರವಾಗಿ ಇಂದುವಿನ ಮನೆಗೇ ಹೋದಳು. ಇಂದುವಿನ ಮನೆಗೆ ಬೀಗ ಹಾಕಿತ್ತು. ನೋಡಿ ವಾಣಿಯು ಆಶ್ಚರ್ಯಕ್ಕೆ

ಮಿತಿಯಿಲ್ಲ! ತನ್ನವರೆಂಬವರಿಲ್ಲದ ಇಂದು ಅದೆಲ್ಲಿಗೆ ಹೋಗಿರಬಹುದು ಎಂದವಳಿಗೆ. ಇದಿರು ಮನೆಯಲ್ಲಿ ವಿಚಾರಿಸಿದಳು. ಇಂದು ತನ್ನನ್ನು ಸಾಕಿದವರ ಮನೆಗೆ ಹೋಗಿರುವಳೆಂದು ತಿಳಿಯಿತು. ಇದನ್ನು ಕೇಳಿ ಅವಳಿಗೆ ಇನ್ನಷ್ಟು ಆಶ್ಚರ್ಯ. ತಾನೆಂದಿಂದಿಗೂ ಅವರ ಮನೆಗೆ ಹೋಗುವುದಿಲ್ಲವೆನ್ನುತ್ತಿದ್ದ ಇಂದು, ಈಗೇಕೆ ತಾನಾಗಿ ಅಲ್ಲಿ ಹೋದಳು ಎಂಬುದನ್ನು ತಿಳಿಯುವುದು ವಾಣಿಯ ಸರಳ ಶಕ್ತಿಗೆ ಮೀರಿದ ಮಾತಾಗಿತ್ತು. ಕೊನೆಗೂ ಅವಳಿಗೆ ಇಂದುವಿನ ಆಶ್ಚರ್ಯಕರವಾದ ವರ್ತನೆಯ ಕಾರಣವು ತಿಳಿಯಲಿಲ್ಲ. ತಿಳಿದಿದ್ದ ರತ್ನನೂ ಹೇಳುವ ಪ್ರಯತ್ನಕ್ಕೆ ಕೈ ಹಚ್ಚದುದರಿಂದ ಕೊನೆಯತನಕವೂ ವಾಣಿಗದು ಸಮಸ್ಯೆಯಾಗಿಯೇ ಉಳಿಯಿತು.

ಜುಲೈ ೧೯೩೮

# ಸನ್ಯಾಸಿ ರತ್ನ

## ೧

ರಾಜ, ರತ್ನ ಇಬ್ಬರೂ ಸ್ನೇಹಿತರು. ಒಂದೇ ಕ್ಲಾಸಿನಲ್ಲಿ ಅವರಿಬ್ಬರೂ ಓದುತ್ತಿದ್ದುದು. ಒಂದೇ ಹಾಸ್ಟೆಲಿನಲ್ಲಿ ಅವರಿಬ್ಬರಿಗೂ ವಾಸ. ಇಬ್ಬರ ಪ್ರಾಯವೂ ಒಂದೇ; ಜಾತಿಯೂ ಒಂದೇ. ರಾಜ ತಂದೆತಾಯಿಯರಿಗೊಬ್ಬನೇ ಮಗ. ರತ್ನನಿಗೆ ಒಬ್ಬಳು ತಂಗಿ ಇದ್ದಳು. ಒಂದು ವಿಷಯ ಹೊರತು ಬೇರೆಲ್ಲಾ ವಿಷಯಗಳಲ್ಲೂ ಇವರಿಬ್ಬರು ಒಂದು.

ರಾಜನಿಗೆ ರತ್ನನ ತಂಗಿಯನ್ನು ಕೊಡುವುದು ನಿಶ್ಚಯವಾಗಿತ್ತು. ಚಿಕ್ಕಂದಿನಿಂದಲೂ ರಾಜನಿಗೆ ರತ್ನನ ತಂಗಿ ಸೀತೆಯಲ್ಲಿ ಪ್ರೀತಿ. ಅವಳ ತಂದೆತಾಯಿಯರೂ ರಾಜನಿಗೆ ಮಗಳನ್ನು ಕೊಡಲು ಅನುಮತಿಸಿದ್ದರು. ಸೀತೆಗೂ ಒಪ್ಪಿಗೆ ಇತ್ತು. ಬೇರೇನೂ ಅಭ್ಯಂತರಗಳಿಲ್ಲದುದರಿಂದ ರಾಜ ಬಿ. ಎ. ಆದೊಡನೆಯೇ ಮದುವೆ ಎಂದು ನಿಶ್ಚಯವಾಗಿತ್ತು.

ಈ ವಿಷಯದಲ್ಲಿ ರತ್ನನ ಒಪ್ಪಿಗೆ ಇಲ್ಲ. ರಾಜನಿಗೆ ತಂಗಿಯನ್ನು ಕೊಡಬಾರದೆಂದಲ್ಲ–ರಾಜನೂ ತನ್ನಂತೆಯೇ ಮದುವೆಯಾಗಬಾರದೆಂದು. ಮದುವೆಯ ಸುದ್ದಿ ಎತ್ತಿದರೆ ರತ್ನನಿಗೆ ಕೋಪ ಬರುತ್ತಿತ್ತು. ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು 'ಥು' ಎನ್ನುತ್ತಿದ್ದ. 'ನಾನು ಸನ್ಯಾಸಿಯಾಗುತ್ತೇನೆ–ಸದಾ ಬ್ರಹ್ಮಚಾರಿಯಾಗಿರುತ್ತೇನೆ. ನನ್ನೊಡನೆ ಮದುವೆಯ ಮಾತೆತ್ತಬೇಡಿ' ಎನ್ನುವುದು–ರತ್ನನ ಉತ್ತರ ಮದುವೆಯ ಪ್ರಸ್ತಾಪಕ್ಕೆ. ಇದೊಂದು ವಿಷಯಕ್ಕಾಗಿ ರಾಜ–ರತ್ನರಿಗೆ ಪ್ರತಿದಿನವೂ ವಾಗ್ವಾದ.

ಕಂ
ಬ
ನಿ

ಒಂದು ದಿನ ರಾತ್ರಿ ಆ ಮಾತು ಈ ಮಾತು ಆಡುತ್ತ ಕೊನೆಗೆ ರಾಜ—

'ಲೋ ರತ್ನ, ನಿನ್ತಂಗಿ ಕಾಗ್ದ ಬಂತೇನೋ' ಎಂದು ಕೇಳಿದ.

'ಇದೆಂಥ ಹುಚ್ಚ್ಹೋ ನಿನ್ಗೆ? ಮೊನ್ನೆ ತಾನೆ ಅವಳ ಕಾಗ್ದ ಬಂದಿದೆ. ಅದ್ಕಿನ್ನು ಉತ್ತರವೇ ಬರ್ದಿಲ್ಲ ನಾನು—ನನ್ನುತ್ರ ಹೋಗೋ ಮೊದ್ಲೆ ಅವಳು ಬರೀತಾಳೇನೋ' ಎಂದು ಹೇಳಿಕೊಂಡು ರತ್ನ ನಗತೊಡಗಿದ.

'ನಗೋದೇಕೋ' ರಾಜ ಕೇಳಿದ.

'ನಿನ್ಹುಚ್ಚು ನೋಡಿ.'

'ತಡಿ, ಒಂದ್ಸಲ ನಿನ್ಗೂ ಹುಚ್ಚ್ಹಿಡೀದೇ ಇರೋಲ್ಲ.'

'ಈ ಜನ್ಮದಲ್ಲಿ ಅಂಥ ಹುಚ್ಚ್ಗೆ ಅವಕಾಶಿಲ್ಲ.'

'ನೋಡೋಣ್ವಂತೆ.'

'ನೋಡೋದೇನು! ನೋಡ್ದಾಗೇ ಇದೆ–ನಾನು ಸನ್ಯಾಸಿ.'

'ರಾವಣ ಸನ್ಯಾಸೀ..'

'ಮುಚ್ಕೊಳೋ ಬಾಯಿ–ಹೆಚ್ಮಾತಾಡ್ಬೇಡ–ಆ ಮೇಲೆ ಕೋಪ ಬರುತ್ತೆ ನೋಡು...'

'ಸನ್ಯಾಸಿಗಳಿಗೆ ಕೋಪ ಬರುತ್ತೇನೋ?'

'ನೋಡ್ಮತ್ತೆ–ತೆಗೆದ್ಯಲ್ಲಾ ನಿನ್ನ ತರ್ಕಾನ. ನನ್ಮಾತು ನಂಬು–ನಾನು ಖಂಡಿತವಾಗಿಯೂ ಮದುವೆ ಆಗೋಲ್ಲ.'

'ನೀನು ಖಂಡಿತವಾಗಿಯೂ ಮದ್ವೆ ಆಗೇ ಆಗ್ತಿ.'

'ನಿನ್ಹಾಂಗೆ ಸಂಸಾರದ ಹಳ್ಳಕ್ಕೆ ಬೀಳೋ ಆಸೆ ನನ್ಗೇನಿಲ್ಲ.'

'ನನ್ಗಿಂತ್ಲೂ ದೊಡ್ಡ ಹಳ್ಳದಲ್ಲಿ ಬೀಳ್ತಿ ನೋಡು ನೀನು. ಆವಾಗ ಹೇಳ್ತೀನಂತೆ ತಡಿ—'

'ಆಗ್ಲಿ—ಹಾಗಾದಾಗ ಹೇಳ್ತೀನು—ಈಗ್ಸದ್ಯ ಬಾಯಿ ಮುಚ್ಕೊಂಡು ಬಿದ್ಕೋ.'

'ಬಿದ್ಕೋತೀನಿ–ಆದ್ರೆ ನೀ ಮದ್ವೆ ಆದ್ರೆ ನನ್ಗೇನು ಕೊಡ್ತಿ ಹೇಳು.'

'ಕೊಡೋದೇನು—ಕೊಡೋದು! ಆದ್ರೆ ತಾನೆ ಕೊಡೋದು.'

‘ಒಂದ್ಪಕ್ಷ ಆದೇಂತಿಟ್ಕೊ—ಆಗೇನು ಕೊಡ್ತಿ ?’

‘ಆಗ್ಲೆ ಪೋದ್ರೆ ನೀನೇನು ಕೊಡ್ತಿ ಹೇಳ್ಕೊಡ್ಲು.’

‘ಮೊನ್ನೆ ಕೊಂಡ್ಕೊಂಡ ಕೆಮುರಾ ಕೊಡ್ತೇನೆ—ಈಗ್ಹೇಳು ನೀನು ಏನ್ಕೊಡ್ತಿ.’

‘ನಾನೇ—ನನ್ನ ಕೈಲಿರೊ ಉಂಗ್ರ ಕೊಡ್ತೇನೆ.’

‘ನಿಜ ತಾನೆ ?’

‘ನಿಜ್ವೇ; ಬಿಡ್ಕೋ ಇನ್ನಾದ್ರೂ.’

‘ಸ್ವಲ್ಪ ತಡಿ, ಬಿಡ್ಕೋತೇನೆ—ಆದ್ರೆ. . . .’

‘ಏನೋ ಅದು ಆದ್ರೆ—ಗೀದ್ರೆ ?’

‘ಏನೂ ಇಲ್ಲ—ಎರಡು ವರ್ಷ ತುಂಬೋದ್ರೊಳ್ಗೆ ನಿನ್ಗೆ ಮದ್ವೆ ಆಗೋಗಿರುತ್ತೆ ಅಂತ.’

‘ನಿನ್ನ ಕೆಮುರಕ್ಕೆ ಒಂದಿದೆ ಹೊತ್ತು—ಸುಮ್ಮನೆ ಕಳಕೋತಿ ಅದನ್ನ.’

‘ನಿನ್ನುಂಗ್ರಕ್ಕೆ ನನ್ನ ಬೆರಳಿನ ಮೇಲೆ ಪ್ರೀತಿ ಬಂದಿರೋ ಹಾಗಿದೆ—ಎರಡು ವರ್ಷ ಕಳೆಯೋದ್ರೊಳ್ಗೆ ಕಾಣುತ್ತಲ್ಲ ಸನ್ಯಾಸಿಗಳ ಬೇಳೇ ಕಾಳು. . . .’

‘ಬಿದ್ಕೋಳೋ ಬಾಯ್ಮುಚ್ಕೊಂಡು.’

‘ಉಂಗುರಕ್ಕೆ ಹೊತ್ತು ಬಂದಿದೆ’ ಎನ್ನುತ್ತಾ ರಾಜ ದೀಪ ಆರಿಸಿ ಮಲಗಿಕೊಂಡ. ‘ಇವನಿಗೊಂದು ಹುಚ್ಚು’ ಎಂದು ರತ್ನನೂ ಕಣ್ಣು ಮುಚ್ಚಿಕೊಂಡ. ಆದರೆ ಆ ದಿನ ಅವರಿಗೆ ಬಹಳ ಹೊತ್ತು ನಿದ್ರೆ ಬರಲಿಲ್ಲ.

೨

ರಾಜ ಬಿ. ಎ. ಆದ ವರ್ಷವೇ ಅವನ ಅಜ್ಜಿ ಸತ್ತುಹೋದರು. ಆದುದರಿಂದ ಆ ವರ್ಷ ರಾಜನ ಮದುವೆ ನಿಂತು ಹೋಯಿತು. ಅಜ್ಜಿ ಮುದುಕಿ; ಸತ್ತು ಹೋದರು. ಆದರೆ ನಾನಿನ್ನೂ ಸೀತೆಯನ್ನು ಮದುವೆಯಾಗುವುದಕ್ಕೆ ಒಂದು ವರ್ಷ ಕಳೆಯಬೇಕಲ್ಲಾ ಎಂದು ರಾಜನಿಗೆ

ಕಂಬನಿ

ವ್ಯಸನ. ಅದೇ ವರ್ಷ ಲಾ ಕಲಿಯುವುದಕ್ಕೆ ಮದರಾಸಿಗೂ ಹೊರಡ ಬೇಕಾಗಿತ್ತು. ಸೀತೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳದೆ ರಾಜನಿಗೆ ಊರಿನಿಂದ ಹೊರಗೆ ಹೋಗುವುದಕ್ಕೆ ಮನಸ್ಸಿಲ್ಲ. ಮದುವೆಯಾದ ಮೇಲೆ ಅಜ್ಜಿ ಸಾಯಬಾರದಿತ್ತೇ ಎಂದುಕೊಳ್ಳುವನು ರಾಜ. ರತ್ನನೊಡನೆ ಮಾತನಾಡುವ ನೆಪನದಿಂದ ದಿನಕ್ಕೆ ಹತ್ತುಸಾರೆಯಾದರೂ ಸೀತಾದರ್ಶನಕ್ಕೆ ರಾಜ ಹೋಗದ ದಿನವಿರಲಿಲ್ಲ. ರತ್ನನಿಗೆ ರಾಜನ ಈ ತರದ ವ್ಯವಹಾರದಿಂದ ತಡೆಯಲಾರದಷ್ಟು ನಗು ಬರುತ್ತಿತ್ತು. ರತ್ನ ನಕ್ಕಾಗಲೆಲ್ಲಾ ರಾಜ 'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ' ಎನ್ನುತ್ತಿದ್ದ. ಆಗ ರತ್ನ 'ಸೊಸೆ'ಗೆ ಕಾಲ ಬಂದಾಗ ಹೇಳಂತೆ ಎನ್ನುತ್ತಿದ್ದ. 'ಬಂದೇ ಬರುತ್ತೆ, ಬಾರದೆ ಹೋದ್ರೆ ಹೇಳ್ತಿತ್ತೆ' ಎಂದು ರಾಜ ರತ್ನನ ಬೆರಳಿನಲ್ಲಿದ್ದ ಉಂಗುರವನ್ನು ನೋಡಿ ನಗುತ್ತ ಹೇಳುತ್ತಿದ್ದ.

ರಜೆ ಕಳೆದು ಹೋಯಿತು. ಜೊತೆಯಾಗಿಯೇ ಇಬ್ಬರೂ ಮದರಾಸಿಗೆ ಹೊರಟರು. ಸೀತೆಯನ್ನು ಬಿಟ್ಟು ಹೊರಡುವಾಗ ರಾಜನಿಗೆ ತಡೆಯಲಾರದಷ್ಟು ದುಃಖ; ರತ್ನನಿಗೆ ಹಿಡಿಸಲಾರದಷ್ಟು ನಗು ರಾಜನ ಅವಸ್ಥೆ ನೋಡಿ. ಅಂತೂ ಇಂತೂ ರೈಲು ಹೊರಟುಬಿಟ್ಟಿತು. ಮದರಾಸಿಗೂ ತಲಪಿದರು.

ಒಂದು ದಿನ ಸಾಯಂಕಾಲ ರಾಜ ಮತ್ತು ರತ್ನ ಸಮುದ್ರತೀರದಲ್ಲಿ ತಿರುಗಾಡುತ್ತಿದ್ದರು. ಆ ದಿನವೇ ಸೀತೆಯ ಕಾಗದ ರತ್ನನಿಗೆ ಬಂದಿದ್ದಿತು. ಅವಳ ಕಾಗದ ಬಂದಾಗಲೆಲ್ಲಾ ತಾನು ಓದಿದ ಮೇಲೆ ರಾಜನಿಗೆ ಕೊಡುವುದು ರತ್ನನ ಪದ್ಧತಿ. ಆ ದಿನ ಮಾತ್ರ ರಾಜನನ್ನು ತಮಾಷೆಮಾಡಬೇಕೆಂದು ಕಾಗದವನ್ನು ಕೊಟ್ಟಿರಲಿಲ್ಲ. ಏನೇನು ಬರೆದಿದೆ ಆ ಕಾಗದದಲ್ಲಿ ಎಂದು ತಿಳಿದುಕೊಳ್ಳಲು ರಾಜನಿಗೆ ಆತುರ. ಕೇಳಿದರೆ ರತ್ನ ಚೇಷ್ಟೆ ಮಾಡುತ್ತಾನೆಂದು ಭಯ. ತಾನಾಗಿ ಕೇಳದೆ ರಾಜನಿಗೆ ಕಾಗದ ಕೊಡಬಾರದೆಂದು ರತ್ನನಿಗೆ ಹಟ. ಕೊನೆಗೆ ರತ್ನನ ಹಟವೇ ಗೆದ್ದಿತು. ರಾಜ ತಾನೇ ಕೇಳಿದ–'ರತ್ನ, ಊರಿಂದ ಕಾಗ್ದ ಬಂತೇನೋ?' 'ಹೂ' 'ಏನಂತೆ?' 'ಏನೂ ಹೆಚ್ಚಿಗೆ ವಿಶೇಷವಿಲ್ಲ.' ರಾಜನಿಗೆ ಸೀತೆಯ ಸುದ್ದಿ

ಕೇಳಬೇಕೆಂದು ಆಸೆ; ಕೇಳಿದರೆ ರತ್ನನ ಹಾಸ್ಯಕ್ಕೆ ದಾರಿಮಾಡಿ ಕೊಟ್ಟಂತಾಗುತ್ತಿತ್ತು. ಕೊನೆಗೂ ಆಸೆಯೇ ಅಭಿಮಾನವನ್ನು ಗೆದ್ದುಬಿಟ್ಟಿತು.

' ನಿನ್ನ ತಂಗಿ ಹೇಗಿದ್ದಾಳಂತೋ ?'

' ಇರೋ ಹಾಗೆ ಇದ್ದಾಳಂತೆ.'

ರಾಜನಿಗೆ ಈ ಉತ್ತರದಿಂದ ತೃಪ್ತಿಯಾಗಲಿಲ್ಲ. ' ಕೊಡು ನೋಡೋಣ' ಎಂದ. ' ನನಗೆ ಬರ್ದ ಕಾಗ್ದ, ನಿನ್ಗ್ಯಾತಕ್ಕೆ ಕೊಡ್ಲಿ ' ಎಂದ ರತ್ನ.

' ಕೊಡೋ ಸುಮ್ನೆ—ತಮಾಷೆ ಮಾಡ್ಬೇಡ.'

' ದಮ್ಮಯ್ಯ ಅನ್ನು ಕೊಡ್ತೀನಿ.'

ರಾಜನ ಆಸೆಯನ್ನು ಅಭಿಮಾನವು ಸ್ವಲ್ಪಹೊತ್ತಿನವರೆಗೆ ತಡೆದರೂ ಪುನಃ ಆಸೆಯೇ ಜಯಶಾಲಿಯಾಯಿತು. ' ದಮ್ಮಯ್ಯ—ಕೊಡೀಗ ' ಎಂದ. ' ದಮ್ಮಯ್ಯ ಅನ್ನಲಿಕ್ಕೆ ಈ ಕಾಗ್ದದ ಚೂರೊಳ್ಗೆ ಏನಿದ್ಯೋ ದೇವ್ರೇ ಬಲ್ಲ ' ಎಂದು ನಗುತ್ತಾ ರತ್ನ ಕಾಗದ ಕೊಟ್ಟ. ' ನಿನ್ಗೂ ಬರದೆ ಇರೋಲ್ಲ ಕಾಲ, ಆಗಾಗ್ಲಿ ಮಾಡ್ತೀನ್ನೋಡು ' ಎಂದುಕೊಂಡು ಕಾಗದ ಓದುತ್ತಾ ಅಲ್ಲಿದ್ದ ಒಂದು ಬೆಂಚಿನ ಮೇಲೆ ರಾಜ ಕುಳಿತುಕೊಂಡ. ರತ್ನ ತನ್ನಕಡೆ ಬರುತ್ತಿದ್ದ ಒಬ್ಬ ಸ್ನೇಹಿತನ ಹತ್ತಿರಹೋಗಿ ಹರಟೆಗಾರಂಭಿಸಿದ. ಆ ಮಾತು ಈ ಮಾತು ಆಡಿ ಕೊನೆಗೆ ಆ ಸ್ನೇಹಿತ ' ಮೈಸೂರು ಸೀಮೆಯಿಂದ ಕುಮಾರಿ ವಾಣಿ ಎಂಬೋಳು ಬಂದಿದ್ದಾಳೆ—ಅವಳ ಸಂಗೀತವಿದೆಯಂತೆ. ಬಾರೋ ಹೋಗೋಣ ' ಎಂದ. ರತ್ನನಿಗೆ ಸಂಗೀತವೆಂದರೆ ಜೀವ. ' ರಾಜ, ಬರ್ತೀಯೇನೋ ' ಎಂದು ಕೇಳಿದ. ಸೀತೆಯ ಕಾಗದ ನೂರು ಬಾರಿ ಯಾದರೂ ಓದದಿದ್ದರೆ ರಾಜನಿಗೆ ತೃಪ್ತಿಯಿಲ್ಲ. ಆದ್ದರಿಂದ ' ನಾ ಬರೋಲ್ಲ. ನೀ ಹೋಗು ' ಎಂದ. ಸ್ನೇಹಿತನೊಡನೆ ರತ್ನ ಕುಮಾರಿ ವಾಣಿಯ ಸಂಗೀತಕ್ಕೆ ಹೋದ. ಸೀತೆಯ ಕಾಗದ ಕಂಠಪಾಠಮಾಡುತ್ತಾ ರಾಜ ಬೆಂಚಿನ ಮೇಲೆಯೇ ಕೂತಿದ್ದ.

೩

ರಾತ್ರಿ ಹತ್ತುಗಂಟೆಯಾಗಿತ್ತು. ರಾಜ ನೂರ ಒಂದನೆಯ ಸಲ ಸೀತೆಯ ಕಾಗದವನ್ನೋದುತ್ತಾ ಅವಳ ಚಿತ್ರದ ಮುಂದೆ ತನ್ನ ರೂಮಿನಲ್ಲಿ ಕೂತಿದ್ದ. ಕುಮಾರಿ ವಾಣಿಯ ಸಂಗೀತಕ್ಕೆ ಹೋಗಿದ್ದ ರತ್ನ ಇನ್ನೂ ಬಂದೇ ಇರಲಿಲ್ಲ. ಹತ್ತೂವರೆಗೆ ಸರಿಯಾಗಿ ರತ್ನ ಬಂದ. ರಾಜ ಇನ್ನೂ ಸೀತಾಧ್ಯಾನದಲ್ಲೇ ಇದ್ದ. ರತ್ನನೂ ಎಂದಿನಂತೆ ಹಾಸ್ಯಮಾಡದೆ ಸುಮ್ಮನೆ ಬಂದು ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ರತ್ನನನ್ನು ಕಂಡೊಡನೆ ರಾಜ ಸೀತೆಯ ಚಿತ್ರವನ್ನು ಮುಚ್ಚಿಟ್ಟು ಎದ್ದು ನಿಂತ. ರಾಜನಿಗೆ ವೇಳೆ ಹೋದುದು ತಿಳಿದಿರಲಿಲ್ಲ. ಗಡಿಯಾರವನ್ನು ನೋಡಿ 'ಇಷ್ಟೊತ್ತಿನ್ತನಕ ಎಲ್ಲಿಗೆ ಹೋಗಿದ್ದೆ ರತ್ನ ?' ಎಂದ.

'ಆಗ್ಲೇ ಮರೆತು ಹೋಯ್ತೇನೋ–ಕುಮಾರಿ ವಾಣಿ ಸಂಗೀತ ಕೇಳೋದಕ್ಕೆ. ಈಗ್ತಾನೆ ಮುಗೀತು–ಸೀದಾ ಬಂದೆ.'

'ಹೇಗಿತ್ತೋ ಸಂಗೀತ.'

'ಹಾಡಿದವಳು ವಾಣಿ ಕಣೋ.'

'ಮೈಸೂರವಳೇನೋ ?'

'ಹೌದಂತೆ-ಇನ್ನೂ ಚಿಕ್ಕ ಹುಡುಗಿ-ಹದ್ನೆಂಟು ವರ್ಷಕ್ಕೆ ಹೆಚ್ಚಿಲ್ಲ. ರೂಪು ರಾಗ ಎರಡಲ್ಲೂ ವಾಣೀನೇ ಅವಳು.'

'ಇದೇನೋ ಸನ್ಯಾಸಿ! ರೂಪು ರಾಗದ ವರ್ಣನೆಗೆ ಹೊರಟ್ಬಿಟ್ಯಲ್ಲಾ!'

'ಸನ್ಯಾಸಿಗೆ ಕಣ್ಣಿಲ್ಲಾಂತ ತಿಳ್ಕೊಂಡ್ಯ ನೀನು ? ಇದ್ದಿದ್ದಿದ್ದಾಗೆ ಹೇಳಿದ್ರೆ ಸನ್ಯಾಸಕ್ಕೆ ಕೊರ್ತೆ ಏನೋ ?'

'ಈಗಿಲ್ಲಾಂತನ್ನು–ಆದ್ರೆ ಸನ್ಯಾಸಿಗಳು ಸಂಗೀತಕ್ಕೂ ಸೌಂದರ್ಯಕ್ಕೂ ಮರುಳಾದ್ರೆ ಮುಂದ್ಗತಿ ?'

'ತಾ ಕೆಟ್ಟ ಕಪಿ, ವನವೆಲ್ಲಾ ಕೆಡ್ಸಿತು' ಎಂತ ಗಾದೆ ಇದೆಯಲ್ಲ ಹಾಗೆ–ನಿನ್ನ ಮಾತಿಗೆ ಕಿವಿಕೊಟ್ರೆ ಸರಿ–ನೀನು ಹೇಳ್ದಾಗೇ ಮುಂದ್ಗತಿ-ನಿನ್ನತ್ರ ಇದೇ ಮಾತು–ನಡಿ ಊಟಕ್ಕೋಗೋಣ.'

ರಾಜ ಮರುದಿನ ಸಾಯಂಕಾಲ ಕಾಲೇಜಿನಿಂದ ಬಂದೊಡನೆಯೇ ಬಟ್ಟೆಯನ್ನು ತೆಗೆದಿಟ್ಟು ಒಂದು ನಾವೆಲ್ ಹಿಡಿದುಕೊಂಡು ಕುರ್ಚಿಯ ಮೇಲೆ ಕುಳಿತುಬಿಟ್ಟ. ರತ್ನ ಹೊಸ ಸೂಟ್ ಹಾಕಿಕೊಂಡು ಕನ್ನಡಿಯ ಮುಂದೆ ನಿಂತು ತಲೆಬಾಚಿಕೊಳ್ಳುತ್ತಾ 'ರಾಜ ತಿರುಗಾಡೋಕ್ಕೆ ಬರೋದಿಲ್ವೇನೋ' ಎಂದು ಕೇಳಿದ 'ಈ ನಾವೆಲ್ ಮುಗೀದೆ ನಾನೇಳೋಲ್ಲ ಇಲ್ಲಿಂದ–ನೀ ಬೇಕಾದ್ರೆ ಹೋಗು' ಎಂದ ರಾಜ. ರತ್ನನೂ ಹೆಚ್ಚಿಗೆ ಒತ್ತಾಯ ಮಾಡಲಿಲ್ಲ. ಮತ್ತೊಂದು ಸಾರಿ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡು ಹೊರಗೆ ಹೋದ. ಆ ದಿನ ರತ್ನ ಹಿಂತಿರುಗಿ ಬರುವಾಗ ಒಂಬತ್ತುಗಂಟೆ ಹೊಡೆದು ಹೋಗಿತ್ತು. ರಾಜನ ನಾವೆಲ್ ಮುಗಿದಿರಲಿಲ್ಲ–ಹಾಗಾಗಿ ಅವನಿಗೂ ಹೊತ್ತು ಹೋದುದೇ ತಿಳಿದಿರಲಿಲ್ಲ. ಆದರೆ ಮರುದಿನವೂ ರತ್ನ ತಿರುಗಾಡಲು ಹೋಗಿ ಬರುವಾಗ ಹತ್ತುಗಂಟೆಯಾಗಿತ್ತು. ರಾಜ ಆ ದಿನ ಊರಿಗೆ ಕಾಗದ ಬರೆಯಲಿಕ್ಕಿದ್ದುದರಿಂದ ರತ್ನನೊಡನೆ ಹೋಗಿರಲಿಲ್ಲ. ರಾತ್ರಿಯ ಊಟದ ಸಮಯವಾದರೂ 'ರತ್ನ ಬರಲಿ, ಜೊತೆಯಲ್ಲಿ ಊಟ ಮಾಡಿದರಾಯಿತು' ಎಂದು ಊಟಮಾಡದೆ ಕೂತಿದ್ದ. ಬಹಳ ಹೊತ್ತಾದರೂ ರತ್ನ ಬರಲಿಲ್ಲ. ಕಾದು ಕಾದು ಸಾಕಾಗಿ ಹೋಯಿತು ರಾಜನಿಗೆ. ರತ್ನ ಬಂದೊಡನೆಯೇ–

'ಎಲ್ಹೋಗಿದ್ಯೋ ಇಷ್ಟೊತ್ತು? ಕಾದು ಕಾದು ಸಾಕಾಯ್ತು'

'ನಾರಾಯಣನ ಹತ್ರ ಮಾತಾಡ್ತಾ ವೇಳೆ ಆದ್ದೇ ತಿಳೀಲಿಲ್ಲ ಕಣೋ.'

'ನಡಿ, ಇನ್ನಾದ್ರೂ ಹೋಗೋಣ ಊಟಕ್ಕೆ–ಏನ್ಮಾತಾಡ್ತಿದ್ರೋ ಇಷ್ಟೊತ್ತು?'

'ಏನೋ ಕಾಡುಹರಟೆ–ಹೋಗೋಣ ಊಟಕ್ಕೆ.'

ಊಟಮಾಡಿಕೊಂಡು ಬಂದ ಮೇಲೆ ರತ್ನ–'ಲೋ, ನಾಳೆ ವಾಣಿ ಸಂಗೀತ ಇದೆ ಮಧ್ಯಾಹ್ನ ಮೂರು ಗಂಟೆಗೆ–ಬರ್ತೀಯೇನೋ?'

'ಕಾಲೇಜು!'

ಕಂ ಬ ನಿ

'ಫ್ರೆಂಚ್ ಲೀವ್ ತಕೊಳೋದು–ಬಹಳ ಚೆನ್ನಾಗಿ ಹಾಡ್ತಾಳೊ ಕೇಳಿದರೆ ಕೇಳ್ಬೇಕು ವಾಣಿ ಸಂಗೀತ.'

'ಇದೇನೋ! ವಾಣಿ ಸಂಗೀತ ಎಷ್ಪರ್‌ಟೈಸ್ ಮಾಡೋಕ್ಕೆ ಒಪ್ಪಿದ್ದಿಯಾ? ಯಾವಾಗ್ಲೂ ವಾಣಿಸ ಹೊಗ್ಳೋಕ್ಕೆ ಹೊರಟಿದ್ದೀಯಲ್ಲ.'

'ನೀನೊಂದು ಸಾರಿ ಕೇಳು ಸಂಗೀತ. ಆ ಮೇಲೆ ಹೇಳ್ತಿ ನೋಡು ನಿಜ್ವಾಗ್ಲೂ ವಾಣೀಂತ.'

'ಆಗ್ಲಿ ಹಾಗಾದ್ರೆ–ನಾಳೆ ನಿನ್ನ ವಾಣೀನ ನೋಡೋಕ್ಕೆ ಬಂದೇ ಬರ್ತೀನಿ.'

೪

'ಹೇಗಿದ್ಳೋ ಸಂಗೀತ?'

'ಪರವಾ ಇಲ್ಲ–ಚೆನ್ನಾಗಿ ಹಾಡ್ತಾಳೆ–ಆದ್ರೆ....

'ಏನು ಆದ್ರೆ?'

'ನೀನ್ಹೇಳೊಷ್ಟು ಮಟ್ಟಿಗೆ ಹಾಡೋಲ್ಲ. ನಿನ್ಮಾತು ಕೇಳಿ ಹೇಗಿದ್ದಾಳೋ ಎಂತಿದ್ದೆ–ಈಗ.'

'ಈಗ?'

'ನಮ್ಮಗೇ ಇದ್ದಾಳೆ–ಹೆಚ್ಚೇನೂ ತೋರೋದಿಲ್ಲ...'

'ಅಯ್ಯೋ ಮಂಕೆ–ಕೋಣನ ಮುಂದೆ ಕಿನ್ರಿ ಬಾರಿಸ್ದಾಗೆ ನಿನ್ಮುಂದೆ ಅವಳ ಸಂಗೀತ–ಆ ರೂಪು ನೋಡು–ಕಂಠಸ್ವರ ಹೇಗಿದೆ ಕೇಳು.'

'ಇದೇನೋ ಸನ್ಯಾಸೀ—'

ರಾಜನ ಮಾತು ಮುಗಿಯುವ ಮೊದಲೇ ಸಂಗೀತ ಮುಗಿಯಿತು. ಜನರು ಹೊರಗೆ ಹೊರಡತೊಡಗಿದರು. ರತ್ನ–'ಸ್ವಲ್ಪ ತಡಿ ರಾಜ–ಈಗ್ಬಂದೆ' ಎಂದು ಹೇಳಿ ಹೊರಗೆ ಹೊರಟ. ಈಗ್ಬಂದೆ ಎಂದು ಹೇಳಿ ಹೋದ ರತ್ನ ಒಂದು ಗಂಟೆಯಾದರೂ ಬರಲಿಲ್ಲ. ಕೂತು ಕೂತು ರಾಜನಿಗೆ

ಸಾಕಾಗಿ ಹೋಗಿತ್ತು. ಹೊರಗೆ ಹೋಗಿ ನಿಂತುಕೊಂಡ. ಅಷ್ಟರಲ್ಲಿ ರತ್ನ ಯಾರೋ ಇಬ್ಬರೊಡನೆ ಮಾತಾಡುತ್ತಾ ಅಲ್ಲೇ ನಿಂತಿದ್ದ ಒಂದು ಮೋಟಾರು ಗಾಡಿಯ ಹತ್ತಿರ ಹೋದ. ರತ್ನನೊಡನೆ ಬಂದವರು ಕಾರಿನಲ್ಲಿ ಕುಳಿತರು. ರತ್ನ ತಲೆಯ ಮೇಲಿದ್ದ ಹ್ಯಾಟನ್ನು ಕೈಯಲ್ಲಿ ಹಿಡಿದುಕೊಂಡು ಕಾರು ಕಣ್ಮರೆಯಾಗುವವರೆಗೂ ಅಲ್ಲಿಯೇ ನಿಂತಿದ್ದ. ರಾಜ ಹಿಂದಿನಿಂದ ಹೋಗಿ ಅವನ ಬೆನ್ನಿನ ಮೇಲೆ ಕೈಯಿಟ್ಟು 'ಯಾರೋ ಈಗ್ಹೋದೋರು?' ಎಂದ. ಬೆಚ್ಚಿಬಿದ್ದು ರತ್ನ 'ಯಾರು' ಎಂದ–'ನಾನು ಕೇಳೋದೂ ಅದೇ, ಯಾರೂಂತ?' ಎಂದ ರಾಜ.

'ಅವ್ರೇ–ನಿನ್ಗವ್ರುನ್ನ ಗೊತ್ತಿಲ್ಲ–ಯಾರೂಂತನ್ನಿ?'

'ಯಾರೂಂತ ಅಂದ್ರೆ ಹೇಗೆ ತಿಳಿಯೋದು–ಕುಮಾರಿ ವಾಣಿ ಅವಳ ಅಪ್ಪ ಎಂದ್ರೆ ಚೆನ್ನಾಗಿ ತಿಳಿಯೋತ್ತೆ' ಎನ್ನುತ್ತ ನಗುವನ್ನು ಸಹಿಸಿಕೊಂಡ ರಾಜ.

ರತ್ನ ಉತ್ತರಕೊಡಲಿಲ್ಲ.

'ನಿನ್ಗವರ ಪರಿಚಯ ಹೇಗಾಯ್ತೋ?'

ನಾರಾಯಣನಿಗೂ ಕುಮಾರಿ ವಾಣಿ ತಂದೆಗೂ ಗುರ್ತಿದೆ. ಅವನೇ ಮೊನ್ನೆ ಇಂಟರ್‌ಡ್ಯೂಸ್ ಮಾಡ್ದ'—

'ಅದೇ ಮೊನ್ನೆ ರಾತ್ರಿ ಸನ್ಯಾಸಿಗಳ ಸವಾರಿ ಬರೋಕ್ಕೆ ಅಷ್ಟೊತ್ತಾಯ್ತೋ? ಮುಚ್ಚುಮರೆ ಮಾಡೋದೂ ಸನ್ಯಾಸದ ಲಕ್ಷಣ ಅಂತ್ಲಾ ಕಾಣುತ್ತೆ ಅಲ್ವೇ?' ರತ್ನ ಜವಾಬು ಕೊಡಲಿಲ್ಲ. ರಾಜ ಗಟ್ಟಿಯಾಗಿ ನಗುತ್ತಾ 'ಬಂತು–ನಿನ್ನುಂಗ್ರಕ್ಕೆ ನನ್ನ ಹತ್ತಿರ ಬರೋಕಾಲ' ಎಂದ. ಅದಕ್ಕೂ ರತ್ನ ನಿರುತ್ತರ. ದಾರಿಯಲ್ಲಿ ಹೋಗುತ್ತಾ 'ರಾಜ, ಉಂಗ್ರ ನಿನ್ಗೆ ಸಿಕ್ಕೋಲ್ಲ' ಎಂದ ರತ್ನ. 'ಅದ್ಯಾಕಪ್ಪಾ?'

'ನಮ್ಮಂಥಾವ್ರನ್ನೆಲ್ಲಾ ವಾಣಿ ಮದ್ವೆ ಆಗ್ತಾಳೇನೋ! ನಾ ಮದ್ವೆ ಆದ್ರೆ ತಾನೆ ಸಿಕ್ಕೋದು ಉಂಗ್ರ ನಿನ್ಗೆ?'

'ಇಷ್ಟರ ಮಟ್ಟಿಗೂ ಸನ್ಯಾಸ ಈಗ್ಬಂತೇ? ಅವಳು ನಿನ್ನ ಮುದ್ದಿ ಆದ್ರೆ ನೀನು ತಾಳ ಹೊಡಿಯೋಕೆ ಕಲ್ತ್ಕೊ. ಸರಿಯಾಗುತ್ತೆ ಆಗ—

'ಲೋ, Don't joke. I am really serious about this matter.

'I am sorry –ಆದ್ರೆ ನಿನ್ತಂದೆತಾಯಿ ಒಪ್ತಾರೇನೋ?'

'ಅವರನ್ನೊಪ್ಸೋದು ನನ್ನ ಕೆಲ್ಸ–ವಾಣಿ ಒಪ್ಪಬೇಕಲ್ಲ.'

'ಅಯ್ಯೋ ಸನ್ಯಾಸೀ–ಸಂಸಾರದ ಹಳ್ಳಕ್ಕೆ ಬೀಳೋ ಕಾಲ ಬಂತೇ ನಿನ್ಗೆ? ನಿನ್ನ ಸ್ಥಿತಿ ನೋಡಿ ಅಳುಬರುತ್ತೆ ನನ್ಗೆ.'

'ಮುಚ್ಕೊಳ್ಳೋ ಬಾಯಿನ.'

'ಇದು ನೊಸೆಕಾಲ ಕಣೋ–ಅತ್ತೇಕಾಲ ಕಳೆದು ಹೋಯ್ತು—'

೫

'ರಾಜ—'

ಓದುತ್ತಾ ಕೂತಿದ್ದ ರಾಜ ತಲೆ ಎತ್ತಿ 'ಏನ್ರತ್ನ' ಎಂದ.

'ಸ್ವಲ್ಪ ಬಾ ಇಲ್ಲಿ.'

'ಏನೋ ಬರೀತಿದೀಯ–ಹೇಳ್ಕೊಡ್ಬೇಕ ನಾನೇನಾದ್ರೂ?'

'ಅದ್ಕೇ ಕೂಗೋದು ಬಾ ಅಂತ.'

'ಅಯ್ಯೋ ಸನ್ಯಾಸೀ, ಲವ್ ಲೆಟರ್ ಬರೀಲಿಕ್ಕೂ ನಿನಗೆ ಅಭ್ಯಾಸ ವಾಗಿ ಬಿಟ್ಟಿದೆಯೋ?'

'ಹಾಸ್ಯ ಕೊನೆಗ್ಮಾಡು–ಸ್ವಲ್ಪ ನೋಡು ಸಾಕೋ ಹೀಗಿದ್ರೆ' ಓದಿನೋಡಿ ರಾಜ ಬಿದ್ದು ಬಿದ್ದು ನಗತೊಡಗಿದ.

'ಇದೇನ್ರತ್ನ, ಸಿನಿಮಾ ನೋಡಿ ಬರೆದ ಹಾಗಿದೆ–ಓದಿದ್ಕೂಡ್ಲೆ' ವಾಣಿ ನಕ್ಕು ನಕ್ಕು ಸತ್ತ್ಹೋಗ್ತಾಳು.'

'ಮತ್ತ್ಹೇಗೋ ಬರಿಯೋದು–ಅನುಭವಸ್ಥ ನೀನಾದ್ರೂ ಸ್ವಲ್ಪ ಹೇಳ್ಕೊಡ್ಬಾರ್ದೇನೋ?'

'ನನ್ನ ಹುಚ್ಚು ಯಾಕಪ್ಪಾ ಈ ಸನ್ಯಾಸಿಗೆ ಹಿಡಿಯಿತು' ಎಂದು ಹೇಳಿಕೊಂಡು ರಾಜ ರತ್ನನಿಗೆ ಕಾಗದ ಬರೆದುಕೊಟ್ಟ. ಪೋಸ್ಟು ಮಾಡಿದರು. ಮರುದಿನವೇ ಪ್ರತ್ಯುತ್ತರ ಬಂತು ವಾಣಿಯದು. ವಾಣಿಯ ಒಪ್ಪಿಗೆ ಓದಿ ರತ್ನ ಕುಣಿದಾಡಿದ. ರಾಜ 'ಸನ್ಯಾಸಿಯ ಬೇಳೇಕಾಳು ಗೊತ್ತಾಯ್ತು' ಎಂದು ನಗುತ್ತಾ ತಾನೂ ಅವನೊಡನೆ ಕುಣಿಯತೊಡಗಿದ.

ರಾಜ– ರತ್ನ ಊಹಿಸಿದಷ್ಟು ತೊಂದರೆಯಾಗಲಿಲ್ಲ–ರತ್ನನ ತಂದೆ-ತಾಯಿಯರ ಅನುಮತಿಗೆ. ಸನ್ಯಾಸಿ ಸಂಸಾರಿಯಾಗುವುದಕ್ಕೆ ಒಪ್ಪಿದ್ದೇ ಸಾಕೆಂದು ಅವರು ಅದೇ ವರ್ಷ ರತ್ನನಿಗೆ ವಾಣಿಯನ್ನು ಮದುವೆ ಮಾಡಿಸಿದರು. ಮದುವೆಯ ದಿನ ರತ್ನನ ಬೆರಳಿನಲ್ಲಿದ್ದ ವಜ್ರದ ಉಂಗುರಕ್ಕೆ ರಾಜನ ಬೆರಳಿಗೆ ವರ್ಗವಾಯಿತು. 'ಸನ್ಯಾಸಿಗೆ ಮೋಕ್ಷವಾಯಿತು' ಎಂದ ರಾಜ. ಮರುವರ್ಷವೇ ಸೀತೆ ರಾಜನವಳಾದಳು. ಈಗ ಎಲ್ಲಾ ವಿಷಯದಲ್ಲೂ ರಾಜ–ರತ್ನರು ಒಂದು. ಅನುವು ದೊರೆತಾಗಲೆಲ್ಲಾ ರಾಜ ರತ್ನನನ್ನು ಹಿಡಿದಿಸಿ ಹಾಸ್ಯಮಾಡುತ್ತಿದ್ದ. ಸುಮ್ಮನಿರೆಂದರೆ–ಇದು ಹೊಸೆ ಕಾಲ, ಅತ್ತೆ ಕಾಲ ಕಳೆದುಹೋಯ್ತು ಎಂದು ಪ್ರತ್ಯುತ್ತರವಿತ್ತು ರತ್ನನ ಬಾಯಿಗೆ ಬೀಗ ಹಾಕುತ್ತಿದ್ದ.

ಜೂನ ೧೯೩೪

# ಒಂದು ಪುಟ್ಟ ಚಿತ್ರ

## ೧

೮-೪-೨೪.

ರಘು,

ಇಲ್ಲಿಂದ ಹೊರಟು ಹೋದ ಮೇಲೆ ಕಾಗದಗಳನ್ನೇ ಬರೆಯುತ್ತಿಲ್ಲವೇಕೆ? ನೀನು ಹೋದಂದಿನಿಂದಲೂ ನಿನ್ನ ಕಾಗದಗಳನ್ನಿದಿರು ನೋಡುತ್ತಿರುವುದೇ ನನಗೆ ಕೆಲಸವಾಗಿದೆ. ನೀನು ಇಲ್ಲಿದ್ದಾಗ ನನ್ನೊಡನೆ ಹೇಳಿದ ಮಾತುಗಳನ್ನೆಲ್ಲಾ ಮರೆತಂತಿದೆ. ರಘು, ಯಾವ ದಿನ ನಿನ್ನೊಡನೆ ಅಡ್ಡ ಹಾದಿಯಲ್ಲಿಕಾಲಿಟ್ಟೆನೋ ಆ ದಿನದಿಂದ ನನ್ನ ಮನಸ್ಸಿಗೆ ಶಾಂತಿಯಿಲ್ಲ. ಭಗವಂತನಿದಿರಿನಲ್ಲಿ ನಾನು ನಿನ್ನವಳೆ ಆದರೂ ಜನರಿಗೆ ತಿಳಿದರೆ ಅವರು ನನ್ನನ್ನು ತಿರಸ್ಕರಿಸದಿರಲಾರರು. ಜನರ ಕಣ್ಣಿದಿರಿನಲ್ಲೇ ನನ್ನನ್ನು ನಿನ್ನವಳನ್ನಾಗಿ ಮಾಡಿಕೊಳ್ಳುವೆಯೆಂದು ಹಿಂದೆ ನೀನು ಹೇಳಿದ್ದೆ. ನೀನು ಹೋಗಿ ಎರಡು ತಿಂಗಳುಗಳಾದರೂ ನಿನ್ನ ಸಮಾಚಾರವೇ ಇಲ್ಲ. ಅದೇಕೆ? ನಾನಿನ್ನು ನಿನಗೆ ಬೇಡವೇ? ನಾನು ಏನೂ ತಿಳಿಯದವಳಾಗಿದ್ದೇನೆ. ನೀನೇ ನನ್ನನ್ನು ಕೊಚ್ಚೆಗೆ ನೂಕಿದೆ; ನೀನು ಅಲ್ಲಿಂದ ನನ್ನನ್ನು ಎತ್ತದಿದ್ದರೆ ಇನ್ನಾರು ತಾನೆ ಎತ್ತುವರು? ದಮ್ಮಯ್ಯ, ನನ್ನ ಕೈ ಬಿಡಬೇಡ, ರಘು.

ನಿನ್ನೆ ಕೆಲವು ವರ್ಷಗಳ ಹಿಂದೆ ಒಬ್ಬನೊಡನೆ ಹೊರಟುಹೋಗಿದ್ದ ನಮ್ಮ ಮನೆಯ ಕೆಲಸದವಳ ಮಗಳು ಬಂದಳು. ಇಲ್ಲಿಂದ ಹೋಗುವಾಗ

ಅವಳು ಹದಿನೇಳು ವರುಷದ ಹುಡುಗಿಯಾಗಿದ್ದಳಂತೆ. ನೋಡುವುದಕ್ಕೂ ಲಕ್ಷಣವಾಗಿದ್ದಿರಬಹುದೆಂದು ಈಗವಳನ್ನು ನೋಡುವಾಗ ತೋರುತ್ತೆ. ಅವಳನ್ನು ಕರೆದುಕೊಂಡು ಹೋದಾತನೀಗ ಅವಳನ್ನು ಬಿಟ್ಟು ಹೊರಟು ಹೋದನಂತೆ. ಅತ್ತಿಗೆ ಅವಳನ್ನು ನೋಡಿ ಏನೆಂದಳು ಗೊತ್ತೆ? 'ಸರಿಯಾದ ಶಿಕ್ಷೆ' ಎಂದು. ಆಗಿನಿಂದಲೂ ನನ್ನ ಮನಸ್ಸು ಹೇಳುತ್ತಿದೆ: ಶಿಕ್ಷೆಗೆ ತಯಾರಾಗೆಂದು.

ರಘು, ಅವಳನ್ನು ಕೆಡಿಸಿದವನಿಗೆ ಶಿಕ್ಷೆಯೇ ಇಲ್ಲವೆ? ಇರಲಾರದು; ಏಕೆಂದರೆ ಅವನು ಗಂಡಸು. ಅಪರಾಧವು ಹೆಂಗಸರದೇ. ಅವಳನ್ನು ಕೆಟ್ಟದಾರಿಯಲ್ಲಿ ಕರೆದುಕೊಂಡು ಹೋದಾತನೀಗ ಇನ್ನೊಬ್ಬಳನ್ನು ಅದೇ ಹಾದಿಯಲ್ಲಿ ಕರೆದೊಯ್ಯಲು ಯತ್ನಿಸುತ್ತಿರಬಹುದು. ಆದರೆ ಗಂಡಸಾದುದರಿಂದ ಅವನಿಗೆ ಶಿಕ್ಷೆಯಿಲ್ಲ. ಆಚಾರದ ಅಧಿಕಾರ ಅಬಲೆಯರ ಮೇಲೆಯೇ.

ರಘು, ಹೀಗೆಲ್ಲಾ ಬರೆದೆನೆಂದು ಕೋಪಿಸಿಕೊಳ್ಳಬೇಡ. ಅವಳನ್ನು ನೆನೆದುಕೊಂಡರೆ ಮನಸ್ಸಿನಲ್ಲಿ ಏನೇನೋ ಆಗುತ್ತೆ.

ನೀನು ಮಾತ್ರ ನನ್ನನ್ನು ಅವಳ ಸ್ಥಿತಿಗೆ ಗುರಿಮಾಡಬೇಡವೆಂದು ಬೇಡಿಕೊಳ್ಳುತ್ತೇನೆ. ಅಂದಿನಂತೆ ನನ್ನನ್ನು ಪ್ರೀತಿಸಲು ಸಾಧ್ಯವಿಲ್ಲದಿದ್ದರೂ ನಿನ್ನ ಹೃದಯದ ಒಂದು ಮೂಲೆಯಲ್ಲಾದರೂ ಒಂದಿಷ್ಟು ಸ್ಥಳ ಕೊಡು. ನಿರಾಕರಿಸಬೇಡ—

ನಿನ್ನ

ಶಾಂತಾ

೨

೧೦–೪–೨೪

ಶಾಂತೆ,

ನಿನ್ನ ಕಾಗದ ಸಿಕ್ಕಿತು. ಓದಿ ಆಶ್ಚರ್ಯವಾಯಿತು. ನಾನೇ ನಿನ್ನನ್ನು ಕೊಚ್ಚೆಗೆ ನೂಕಿದೆ ಎಂದು ಬರೆದಿರುವೆ. ನೀನು ಹೇಳಲು ಆತುರದಿಂದಿದ್ದುದರಿಂದಲ್ಲವೇ ನಾನು ನೂಕಿದ್ದು? ಅಂತಹ ಸಾಧ್ವಿಯಾಗಿದ್ದರೆ

ಹಿಂದೆಯೇ ನಿನಗೆ ಬುದ್ಧಿಯಿರಬೇಕಿತ್ತು. ಈಗ ನನ್ನನ್ನು ದೂರಿ ಏನು ಪ್ರಯೋಜನ? 'All is fair in love and war.'

ನಿನ್ನನ್ನು ಇನ್ನಾರಾದರೂ ಮದುವೆಯಾಗುವವರಿದ್ದರೆ ಮದುವೆಯಾಗು. ನನ್ನಡ್ಡಿಯೇನೂ ಇಲ್ಲ.

ರಘು

೩

೫–೫–೨೪

ರಾಜ,

ನನ್ನ ಹಿಂದಿನ ಕಾಗದಗಳೊಂದಕ್ಕೂ ಪ್ರತ್ಯುತ್ತರವೇ ಇಲ್ಲ. ಏಕೆ? ನೀನೇನಾದರೂ ತೊಂದರೆಯಲ್ಲಿರುವೆಯಾ?—ನಿನ್ನ ಚಿಂತೆ ಏನೆಂದು ನನಗೂ ಹೇಳಬಾರದೆ? ನನ್ನಿಂದೇನಾದರೂ ಆಗಬೇಕಾಗಿದ್ದರೆ ಸಂಕೋಚವಿಲ್ಲದೆ ಹೇಳು; ಕೈಲಾದಮಟ್ಟಿಗೆ ಸಹಾಯ ಮಾಡುತ್ತೇನೆ.

ಈ ಕಾಗದಕ್ಕಾದರೂ ಜವಾಬು ಬರಬಹುದೆಂದು ನಿರೀಕ್ಷಿಸುವ,–

ನಿನ್ನ,

ನಾಣ

೪

೭–೫–೨೪

ನಾಣ,

ನಿನ್ನ ಕಾಗದಗಳೆಲ್ಲವೂ ಸಿಕ್ಕಿದರೂ ಪ್ರತ್ಯುತ್ತರ ಬರೆಯದಿದ್ದುದಕ್ಕೆ ಕ್ಷಮಿಸು. ಹಲವು ಸಾರಿ ನಿನಗೆ ಬರೆಯಲು ಕುಳಿತೆ; ಎಷ್ಟೋ ಕಾಗದಗಳನ್ನು ಬರೆದೆ. ಆದರೆ ಒಂದನ್ನೂ ಟಪ್ಪಾಲಿಗೆ ಹಾಕಲು ಧೈರ್ಯ ಬರಲಿಲ್ಲ. ನಾನಂತೂ ಅತಿ ಕಷ್ಟದಲ್ಲಿದ್ದೇನೆ. ನಿನ್ನನ್ನೂ ನನ್ನ ಕಷ್ಟದಲ್ಲಿ ಭಾಗಿಯಾಗುವಂತೇಕೆ ಮಾಡಬೇಕು? ನನ್ನ ವಿಷಯದಲ್ಲಿ ನಿನಗೇನು ಮಾಡಲೂ ಸಾಧ್ಯವಿಲ್ಲ. ಸುಮ್ಮನೆ ನನ್ನ ಕಷ್ಟ ಹೇಳಿ ನಿನ್ನನ್ನು ವ್ಯಸನಕ್ಕೆ ಗುರಿಮಾಡಲೆ? ಬರೆಯಲಿಲ್ಲವೆಂದು ಕೋಪಿಸಬೇಡ; ಕ್ಷಮಿಸು.

ನಿನ್ನ,

ರಾಜ

೫

೨-೫-೨೪

ರಾಜ,

ನನ್ನೊಡನೆಯೂ ಸಂಕೋಚವೇ? ನಿನ್ನ ಸುಖದಲ್ಲಿ ನಾನು ಪಾಲುಗಾರನಾಗುತ್ತಿದ್ದೆ. ನಿನ್ನ ವ್ಯಸನದ ದಿನಗಳಲ್ಲಿ ನನ್ನನ್ನೇಕೆ ವಂಚಿಸುತ್ತಿರುವೆ? ನಿನ್ನ ಸ್ನೇಹವೆಲ್ಲಾ ಏನಾಯ್ತು? ಏನಿದ್ದರೂ ನನ್ನೊಡನೆ ಹೇಳುತ್ತಿದ್ದ ನೀನು ಈಗೇನನ್ನು ಬಚ್ಚಿಡಲು ಪ್ರಯತ್ನಿಸುತ್ತಿರುವೆ? ನಿನ್ನ ವಿಷಯದಲ್ಲಿ ನನ್ನಿಂದೇನೂ ಮಾಡಲು ಸಾಧ್ಯವಿಲ್ಲದಿದ್ದರೂ ನಿನ್ನ ಕಷ್ಟದಲ್ಲಾದರೂ ಭಾಗಿಯಾಗುತ್ತೇನೆ. ನೀನು ನಿಜವಾಗಿಯೂ ನನ್ನನ್ನು ಸ್ನೇಹಿತ ಎಂದೆಣಿಸುತ್ತಿದ್ದರೆ ನಿನ್ನ ಕಷ್ಟಕ್ಕೆ ಕಾರಣವನ್ನು ಬರಿ. ನಿನ್ನ ಸುಖದಲ್ಲಿ ಪಾಲುಗಾರನಾಗಿದ್ದಂತೆಯೇ ಕಷ್ಟಕಾಲದಲ್ಲೂ ಇರುವೆನೆಂಬುದನ್ನು ನೆನಪಿನಲ್ಲಿಡು—

ಯಾವಾಗಲೂ ನಿನ್ನ,

ನಾಸ

೬

ನಾಸ,

ನಿನ್ನೊಡನೆ ಹೇಳಬಾರದ ವಿಷಯಗಳೇನೂ ಇಲ್ಲ. ನಾನು ಹೇಳದಿದ್ದರೂ ತಾನಾಗಿಯೇ ತಿಳಿಯುವ ವಿಷಯವದು. ಬಚ್ಚಿಟ್ಟು ಉಪಯೋಗವೇನು?

ನನ್ನ ತಂಗಿ ಶಾಂತೆಯನ್ನು ನೀನು ನೋಡಿರುವೆಯಷ್ಟೆ. ನೀನು ನೋಡಿದಾಗ ಅವಳು ಹತ್ತು ವರುಷದ ಹುಡುಗಿ. ಆಗಲೇ ಅವಳು ವಿಧವೆಯಾಗಿದ್ದಳು; ನಿನಗದು ಗೊತ್ತಿದೆ. ಅಮ್ಮ ಸಾಯುವಾಗ 'ರಾಜ, ಶಾಂತೆ ಏನೂ ತಿಳಿಯದ ಮಗು; ಅವಳನ್ನು ಪ್ರೀತಿಯಿಂದ ಕಾಪಾಡು' ಎಂದಿದ್ದಳು. ನಾಸ, ಅಮ್ಮನ ಕಡೆಯ ಮಾತನ್ನು ನಾನು ನೆರವೇರಿಸಲಿಲ್ಲ. ನನ್ನ ಪಾಪಿಜನ್ಮಕ್ಕೆ ಧಿಕ್ಕಾರ!

ಕಂಬನಿ

ನನ್ನ ಹೆಂಡತಿ ಶಾಂತೆಯನ್ನು ಚೆನ್ನಾಗಿ ನಡೆಸಿಕೊಳ್ಳುತ್ತಿರಲಿಲ್ಲ. ಮೊದಲು ನನಗದು ತಿಳಿಯಲಿಲ್ಲ. ಈಗ ತಿಳಿಯಿತು. ಅಯ್ಯೋ—

ಆರು ತಿಂಗಳ ಹಿಂದೆ ನನ್ನ ಹೆಂಡತಿಯ ಅಣ್ಣ ಬಂದಿದ್ದ. ಅವನು ದುಷ್ಟನೆಂದು ನನಗೆ ಗೊತ್ತಿದ್ದರೂ ನನಗವನಿಂದ ಕೆಡುಕಾಗಲಾರದೆಂದೆಣಿಸಿದ್ದೆ. ನಾನಾಗಲೀ ನನ್ನ ಹೆಂಡತಿಯಾಗಲೀ ಶಾಂತೆಗೆ ಸ್ವಲ್ಪ ದಯೆಯನ್ನು ತೋರಿಸಿದ್ದರೆ ಅವಳಿಂದು ಬೀದಿಯ ಭಿಕಾರಿಣಿಯಾಗುತ್ತಿರಲಿಲ್ಲ. ರಘು (ನನ್ನ ಹೆಂಡತಿಯ ಅಣ್ಣ) ಅವಳನ್ನು ನರಕದ ದಾರಿಯಲ್ಲಿ ಕರೆದೊಯ್ಯುವುದನ್ನು ನೋಡಿದರೂ ನನ್ನ ಹೆಂಡತಿ ಸುಮ್ಮನಿದ್ದಳು. ಅರಿಯದ ಶಾಂತೆಯನ್ನು ತಿಳಿಯದ ನಾನೂ ತಿಳಿದ ನನ್ನ ಹೆಂಡತಿಯೂ ಕೂಡಿ ನರಕಕ್ಕೆ ನೂಕಿಬಿಟ್ಟೆವು. ಅಷ್ಟು ಹೊತ್ತಿಗೆ ಸರಿಯಾಗಿ ಅವಳನ್ನು ಕೈಹಿಡಿದು ವಂಚನೆಯ ಮಾತುಗಳಿಂದ ಮರುಳುಮಾಡಿ ಕರೆದುಕೊಂಡು ಹೋಗಲು ರಘು ಬಂದಿದ್ದ. ಬ್ರಹ್ಮಸಮಾಜಕ್ಕೆ ಸೇರಿ ಅವಳನ್ನು ಮದುವೆಯಾಗುತ್ತೇನೆಂದು ಮಾತು ಕೊಟ್ಟಿದ್ದನಂತೆ. ಶಾಂತೆಯನ್ನು ಬಿಟ್ಟುಹೋದಮೇಲೆ ಅವನ ಮನಸ್ಸಿನಿಂದ ಆ ಮಾತುಗಳೂ ಮಾಯವಾದಂತೆ ತೋರುತ್ತದೆ. ಅವನು ಹೊರಟುಹೋಗಿ ಸುಮಾರು ಎರಡು ತಿಂಗಳುಗಳಾದ ಮೇಲೆ ಒಂದು ದಿನ ಬೆಳಗಿನ ಹೊತ್ತಿನಲ್ಲಿ ನೋಡುವಾಗ ಶಾಂತೆ ಇರಲಿಲ್ಲ. ಒಂದು ಕಾಗದವನ್ನು ನನ್ನ ಮೇಜಿನ ಮೇಲಿಟ್ಟು ಅವಳು ಹೊರಟುಹೋಗಿದ್ದಳು. ಅವಳ ಕಾಗದದಲ್ಲಿ ಹೀಗಿತ್ತು. "ಅಣ್ಣಾ, ಕೆಟ್ಟ ಹೆಸರನ್ನು ಪಡೆಯದ ನಮ್ಮ ಮನೆತನಕ್ಕೆ ನಾನು ಕಲಂಕ ತಂದಿದ್ದೇನೆ. ಆದರದು ಇತರರಿಗೆ ತಿಳಿಯುವ ಮೊದಲೇ ನಾನದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ನಿನಗಾಗಲೀ ಅತ್ತಿಗೆಗಾಗಲೀ ನನ್ನ ಸ್ಥಿತಿಯನ್ನು ಹೇಳುವ ಧೈರ್ಯ ನನಗಿಲ್ಲ. ನಿನ್ನ ವ್ಯಸನವನ್ನೂ ಅತ್ತಿಗೆಯ ತಿರಸ್ಕಾರವನ್ನೂ ಸಹಿಸುವ ಶಕ್ತಿ ನನಗಿಲ್ಲ. ಹೇಳದೆ ಹೊರಟುಹೋಗುವುದಕ್ಕಾಗಿ ಕ್ಷಮಿಸು —ಶಾಂತೆ"

ನಾನು, ನಾನವಳನ್ನು ಪ್ರೀತಿಯಿಂದ ನೋಡಿಕೊಂಡಿದ್ದರೆ ಅವಳು ಪರದೇಶಿಯಾಗುತ್ತಿರಲಿಲ್ಲ. ಶಾಂತೆಯನ್ನು ನಮ್ಮ ಮನೆಯಿಂದ ನೂಕಿದೆ.

ಇನ್ನು ನನ್ನ ಹೃದಯಕ್ಕೆ ಶಾಂತಿ ದೊರೆಯುವುದು ತಾನೇ ಹೇಗೆ? ನನ್ನ ಬಾಳು......

ಕ್ಷಮಿಸು— ನನ್ನ ಕಷ್ಟವನ್ನು ಹೇಳಿ ನಿನ್ನನ್ನು ನೋಯಿಸುವುದಕ್ಕೆ.

ರಾಜ

೭

೨೦-೫-೨೪

ರಾಜ,

ಈಗ ತಾನೇ ನಿನ್ನ ಕಾಗದ ಸಿಕ್ಕಿತು. ಓದಿ ಮನಸ್ಸು ಕೊರೆಯುತ್ತಿದೆ. ಹಿಂದಿನ ದಿನಗಳಲ್ಲಿ ನನ್ನೊಡನೆ ಆಡುತ್ತಿದ್ದ ನಗುಮುಖದ ಶಾಂತೆ ಈಗ..ಅಯ್ಯೋ ನಾವಿದ್ದು ಪ್ರಯೋಜನವೇನು?

ರಾಜ, ಅವಳನ್ನು ಹುಡುಕುವುದು ನಮ್ಮ ಕರ್ತವ್ಯ. ಅವಳನ್ನು ಪತ್ತೆಮಾಡಿ, ಅವಳ ಮುಂದಿನ ಜೀವನವನ್ನು ಸುಖಮಯವಾಗಿ ಮಾಡುವುದು ನಮ್ಮ ಕೈಯಲ್ಲಿದೆ. ಬೇಸರದಿಂದ ಸುಮ್ಮನೆ ಕೂರದೆ ಅವಳನ್ನು ಹುಡುಕುವುದಕ್ಕೆ ಹೊರಡು. ನಾನೂ ಅದರ ಸಲುವಾಗಿ ಈ ರೈಲಿಗೇ ಹೊರಡುತ್ತೇನೆ. ನಮ್ಮ ಕರ್ತವ್ಯವಿದೆಂದು ನನಗೆ ತೋರುತ್ತದೆ.

ನಿನ್ನ,

ನಾನ

೮

೨೧-೫-೨೪

೧೨-೩೦ ಹಗಲು

ನಾನ,

ನಿನ್ನ ಕಾಗದ ಸಿಕ್ಕಿತು. ಅದರೊಡನೆಯೇ ನಿನ್ನಿನ ವರ್ತಮಾನ ಪತ್ರಿಕೆಯೂ ಬಂತು.

ಗಂಡಸರು ಹೆಂಗಸರಿಗಿಂತ ಧೈರ್ಯವಂತರಂತೆ; ಸಹನ ಶಕ್ತಿ ಇರುವವರಂತೆ; ನಿಜವೆಂದು ನಾನೂ ನಂಬಿದ್ದೆ. ಆದರೆ ಆ ಪತ್ರಿಕೆಯನ್ನು ಓದಿದ ಮೇಲೆ ಮಾತ್ರ ತಡೆಯಲಾರದೆ ಹೋದೆ..ಹಾಗೆಯೇ ಮೇಜಿನ ಮೇಲೆ

ಕಂ
ಬ
ನಿ

ಮಲಗಿದೆ. ಮಧ್ಯಾಹ್ನದ ಊಟಕ್ಕೆ ನನ್ನ ಹೆಂಡತಿಯು ಕರೆಯುತ್ತಿದ್ದಾಳೆ. ಊಟವೆ! ಶಾಂತೆಯನ್ನು ಕೊಂದ ನನಗೆ ಊಟವೆ!......

ನಾನ, ಹಿಂದಿನ ದಿನಗಳ ಸ್ಮರಣೆಯನ್ನೇಕೆ ಮಾಡುವೆ? ಆಗಿನ ಆಟ, ಆಗಿನ ಸುಖ, ಆಗಿನ ಸಂತೋಷ, ಆಗಿನ ಒಂದೂ ಈಗಿಲ್ಲ–ಬಾಲ್ಯವಲ್ಲವೇ ಮನುಷ್ಯನ ಸುಖದ ಕಾಲ. ಅದರಲ್ಲೂ ನನ್ನ ಮತ್ತು ಶಾಂತೆಯ ಬಾಲ್ಯ......

ಪೇಪರಿನಲ್ಲಿ ಏನಿತ್ತೆಂದು ನೀನು ಯೋಚಿಸಬಹುದು. 'ಇಂದು ಇಲ್ಲಿಗೆ ನಾಲ್ಕು ಮೈಲು ದೂರದಲ್ಲಿರುವ ಕೆರೆಯಲ್ಲಿ ಒಂದು ಹೆಂಗಸಿನ ಶವವು ಸಿಕ್ಕಿತು. ಅವಳು ಗರ್ಭಿಣಿ. ಜನರಲ್ ಆಸ್ಪತ್ರೆಯಲ್ಲಿ ಅವಳ ಶವವನ್ನಿಟ್ಟಿದ್ದಾರೆ. ಅವಳು ಯಾರೆಂದು ಗೊತ್ತಿಲ್ಲ. ಯಾರಿಗಾದರೂ ಅವಳ ವಿಷಯ ತಿಳಿದಿದ್ದರೆ ದಯಮಾಡಿ ತಿಳಿಸಬೇಕೆಂದು ಕೋರುತ್ತೇವೆ.' ಜನರಲ್ ಆಸ್ಪತ್ರೆಗೆ ಹೋದೆ. ನಾನ, ಶವವನ್ನು ನೋಡಿದೆ..ಶಾಂತೆ!..

ಬೆಳ್ಳಗಾದ ಮುಖ. ಬಿಳೀ ಹಣೆಯಲ್ಲಿ ದಯಾಮಯಿಯಾದ ನಿಸರ್ಗ ಒಬ್ಬಳು ಇಟ್ಟ ಕೆಂಪು–ಕುಂಕುಮ ಬೊಟ್ಟು.... ಇನ್ನು ಬರೆಯಲಾರೆ–

ರಾಜ

ಅಕ್ಟೋಬರ ೧೯೩೩

# ಅವಳ ಭಾಗ್ಯ

ಮದುವೆಯೇ ಬೇಡವೆನ್ನುತ್ತಿದ್ದ ಕಿಟ್ಟಣ್ಣ ಆ ಹಳ್ಳಿಯ ಜಮೀನ್ದಾರರ ಮಗಳನ್ನು ಮದುವೆಯಾಗಲೊಪ್ಪಿದ್ದೇ ತಡ—ಒಮ್ಮೆ ಕಿಟ್ಟು ಮದುವೆ ಮಾಡಿಕೊಂಡು ಸಂಸಾರ ಹೂಡಿದರೆ ಸಾಕು ಎಂದಿದ್ದ ಅಣ್ಣನೂ ಒಪ್ಪಿದ. ಎಲ್ಲ ಸಿದ್ಧತೆಗಳೂ ಭರದಿಂದ ನಡೆದವು. ಹಾಂ, ಹುಂ—ಎನ್ನುವುದರೊಳಗೆ ಮದುವೆಯೂ ಆಗಿಹೋಯ್ತು. ನಾನೀಗ ಹೇಳಬೇಕೆಂದಿರುವುದು ಆ ಮದುವೆಯ ಸಮಯದ ಸಮಾಚಾರ.

ಕಿಟ್ಟಣ್ಣನೂ ಅವನ ಹೆಂಡತಿಯೂ ಆರತಿ ಅಕ್ಷತೆಗೆ ಹಸೆಯ ಮೇಲೆ ಕೂತಿದ್ದರು. ಹಿಂದಿನ ದಿನದ ಮದುವೆಯ ಗಲಾಟೆಯಲ್ಲಿ ವಧೂವರರನ್ನು ಸರಿಯಾಗಿ ನೋಡಿ ಹಾಸ್ಯಮಾಡಲು ಯಾರಿಗೂ ಸಮಯವಾಗಲೀ ಸಾಹಸವಾಗಲೀ ಇರಲಿಲ್ಲ. ಆದರೆ ಮರುದಿನ ಅರಸಿನ—ಎಣ್ಣೆಗೆ ಕೂರಿಸಿದಾಗ ಹೆಂಗಸರಿಗೇ ತಾನೆ ಸರ್ವ ಸ್ವಾತಂತ್ರ್ಯ! ಅಂದು ಊರಿನ ಮುತ್ತೈದೆಯರೆಲ್ಲಾ ಹಾಜರಾಗಿದ್ದರು. ಎಂದೂ ಅಷ್ಟೊಂದು ಜನ ಹೆಂಗಸರ ನೋಟಕ್ಕೆ-ಅವರ ಹುಚ್ಚು ಹಾಸ್ಯಕ್ಕೆ ಗುರಿಯಾಗದಿದ್ದ ಕಿಟ್ಟಣ್ಣನಿಗೆ ಆಗ 'ಸಾಕಪ್ಪ, ಮದುವೆಯ ಸುಖ ಸಾಕು' ಎನಿಸಿರಬೇಕು. ನನ್ನನ್ನು ಕೂಗಿ 'ಹೇಗಾದರೂ ಈ Ordeal ಒಂದ್ಸಾರಿ ಮುಗಿಸೋದಕ್ಕೆ ಹೇಳು' ಎಂದ. ಆದರೆ ಆ ಸ್ತ್ರೀರಾಜ್ಯದಲ್ಲಿ ಅವನ ಮಾತಿಗೆಲ್ಲಿ ಬೆಲೆ ದೊರೆಯಬೇಕು?

'ಜಯ, ನೀ ಒಂದು ಹಾಡು ಹೇಳೆ' ಎಂದು, 'ನನಗೆ ಬರೋಲ್ಲ' ಎಂದು ಬಿಂಕಮಾಡುತ್ತಿದ್ದ ಜಯನನ್ನು ಬಲಾತ್ಕರಿಸಿ ಹಾಡಿಸಿದ್ದಾಯಿತು.

ಕೂತು ಬೇಸತ್ತಿದ್ದ ಕಿಟ್ಟಣ್ಣ ಅವಳ ಕರ್ಕಶ ಕಂಠದಿಂದ ಹೊರಟ ಕರ್ಣ ಕಠೋರ ಸ್ವರವನ್ನು ಹೇಗೆ ಸಹಿಸಿಕೊಂಡನೋ ತಿಳಿಯದು. ಹೇಗೂ ಅವಳ ಹಾಡು ಮುಗಿಯಿತು. ಇನ್ನೇನು ಬದುಕಿದೆ ಎಂದುಕೊಂಡ. ಆದರೆ ಒಂದೇ ಒಂದು ಹಾಡು ಹೇಳಿ ಆರತಿನಿನ್ನ ಮುಗಿಸುವುದೇ? ಛೆ, ಎಂದಿಗೂ ಇಲ್ಲ—ಕಮ್ಮಿ ಪಕ್ಷ ಹತ್ತಿಪ್ಪತ್ತಾದರೂ ಹೇಳಬೇಡವೇ?

ಆಗಲಿ ಎಷ್ಟಾದರೂ ಹಾಡಿಕೊಳ್ಳಲಿ, ಆದರೆ ಬೇಗ ಬೇಗ ಹೇಳಿ ಮುಗಿಸಿಬಿಡಬಾರದೇ? 'ಹೇಳೀಂದ್ರೆ—ನೀವೇ ಹೇಳೀಂದ್ರೆ – ನೀವ್ಹೇಳೀಂದ್ರೆ' ಎಂದು ಹತ್ತಾರು ಸಾರಿ ಹೇಳಿಸಿಕೊಂಡು ನನಗೆ ಗಂಟಲು ಸರಿಯಾಗಿಲ್ಲ—ಎಂದು ಬೇರೆ ವೈಯ್ಯಾರಮಾಡಿ ಆ ಮೇಲೆ ಹಾಡಲು (ಅರಚಲು) ಪ್ರಾರಂಭಿಸಿದರೆ ಗಂಟೆ ಬಂದಾದರೂ ಅದಕ್ಕೆ ಅಂತ್ಯವೇ ಇಲ್ಲ. ಕಿಟ್ಟಣ್ಣ 'ಗಂಟಲು ಸರಿಯಿಲ್ಲದೇನೇ ಇಷ್ಟೊಂದು ಹೊತ್ತು ಅರಚುವಾಗ ಸರಿಯಿದ್ದರೆ ದೇವರೇ ಗತಿ' ಎಂದಂದುಕೊಂಡ. ಅಂತೂ ಕೊನೆಗೆ ಹೇಗಾದರೂ ಎಲ್ಲರ ಹಾಡುಗಾರಿಕೆಯೂ ಮುಗಿಯಿತು. ಇನ್ನು ಆರತಿಮಾಡಿ ಬಿಡುಗಡೆ ಮಾಡಬಹುದು ಎಂದು ಕಿಟ್ಟಣ್ಣ ನೆಟ್ಟಗೆ ಕೂತ. ಆದರೆ ಅದು ಕೇವಲ ಒಂದೆರಡು ನಿಮಿಷದ ಆಸೆ ಅಷ್ಟೆ. ಮುತ್ತೈದೆಯರಿಬ್ಬರು ಆರತಿಯನ್ನು ಹಿಡಿದುಕೊಂಡು ಇದಿರು ಬಂದು ನಿಂತು ಪುನಃ ಪ್ರಾರಂಭಿಸಿದರು—'ಆರತಿ ಎತ್ತುವ ಹಾಡು ನೀವೇ ಹೇಳಿ, ನೀವೇ ಹೇಳಿ' ಎಂದು ತಮ್ಮ ತಮ್ಮೊಳಗೇ ವಾದಕ್ಕೆ. ಅವರಿಬ್ಬರ ವಾದ ಕಮ್ಮಿ ಪಕ್ಷ ಒಂದು ಗಂಟೆಯತನಕವಾದರೂ ನಡೆಯುತ್ತಿತ್ತೇನೋ! ಆದರೆ ನೋಡಿ ಬೇಸತ್ತ ಕಿಟ್ಟಣ್ಣ, ನನ್ನ ಹತ್ತಿರ ಕೂತಿದ್ದ ಹುಡುಗಿಯೊಬ್ಬಳನ್ನು ನೋಡಿ 'ಹೋಗಲಿ—ಅವರಿಗೆ ಬರದಿದ್ದರೆ ಪರವಾ ಇಲ್ಲ—ನೀನಾದರೂ ಒಂದು ಹೇಳಮ್ಮ' ಎಂದ. ಕಿಟ್ಟಣ್ಣ ಆ ಮಾತುಗಳನ್ನಾಡಿದ್ದು, ಬೆಪ್ಪೇ ಮೂರ್ತಿಮಂತವಾಗಿದ್ದಂತೆ ಕುಳಿತಿದ್ದ ಆ ಹುಡುಗಿಯಾದರೂ ಕಿರುಚಿ ಇವರ ವಾದವನ್ನು ಕೊನೆಗೊಳಿಸಲಿ ಎಂದು. ನನಗೂ ಕಿಟ್ಟಣ್ಣನ ಮಾತು ಕೇಳಿ ನಗು ಬಂತು. ಆ ಹುಡುಗಿ ಹಾಡುವುದೇ! ಇಷ್ಟು ಹೊತ್ತು ಹಾಡಿದವರ ಪಾಡೇ ಹೀಗೆ—ಇವಳು......

ಹುಡುಗಿ ಹದಿನೈದು ವರ್ಷ ಪ್ರಾಯದವಳು. ಆದರೆ ಬೆಳವಣಿಗೆಯನ್ನು ನೋಡಿದರೆ ಪ್ರಾಯ ಇನ್ನೂ ಹೆಚ್ಚಾಗಿದೆ ಎನ್ನುವಂತಿದ್ದಳು. ಇದ್ದಲಿನಂತೆ ಮೈವರ್ಣ. ಒಂದೆರಡು ತಿಂಗಳ ಹಿಂದೆ ಖಾಯಿಲೆ ಬಿದ್ದಿದ್ದಳಂತೆ—ತಲೆ ಕೂದಲೆಲ್ಲಾ ಉದುರಿ ಆಗ ತಾನೇ ಪುನಃ ಬರಲು ಪ್ರಾರಂಭವಾಗಿತ್ತಷ್ಟೇ. ಚಪ್ಪಟೆ ಮೂಗು. ಇನ್ನು ಕಣ್ಣು? ಯಾವಾಗಲೂ ರೆಪ್ಪೆಗಳ ಅಡಿಯಲ್ಲೇ ಅಡಗಿಕೊಂಡಿರುತ್ತಿದ್ದ ಅವಳ ಕಣ್ಣುಗಳನ್ನು ನಾನು ನೋಡಿರಲಿಲ್ಲ. ಆದರೂ ಅವುಗಳನ್ನು ಮುಚ್ಚಿಕೊಂಡಿದ್ದ ಉದ್ದವಾದ ರೆಪ್ಪೆಗಳನ್ನು ನೋಡಿ ಈ ಅವಲಕ್ಷಣದ ಮುಖಕ್ಕೆ ಇಷ್ಟೊಂದು ಸೊಗಸಾದ ರೆಪ್ಪೆಗಳು ಏಕೆ? ಎಂದೆನಿಸಿತ್ತು ನನಗೆ. ಕಿಟ್ಟಣ್ಣನ ಮಾವನ ಗುಮಾಸ್ತರ ಮಗಳವಳು. ಬಡತನವೂ ಆ ಕುರೂಪವೂ ಜೊತೆಯಾಗಿ ಅವಳಿಗೆ ವರ ಸಿಕ್ಕದಂತೆ ಮಾಡಿದ್ದವು. ಎಲ್ಲರಿಗೂ ಅವಳೆಂದರೆ ಅಷ್ಟಷ್ಟೆ. 'ಪಾರೂ ಅದು ಮಾಡೆ. ಇದು ಮಾಡೆ' ಎಂದು ಕೆಲಸ ಮಾಡಿಸುವವರೇ ಎಲ್ಲರೂ. ಅವಳಿಗೂ ಕೆಲಸವೆಂದರೆ ಬೇಸರವಿದ್ದಂತೆ ತೋರಲಿಲ್ಲ. ನಾವು ಅಲ್ಲಿಗೆ ಹೋದಂದಿನಿಂದ ನನ್ನ ಹಿಂದೆ ಮುಂದೆ ತಿರುಗಹತ್ತಿದ್ದಳು. ರಸ್ತೆಯಲ್ಲಿ ಹೋಗುವ ನಾಯಿಯು ತಲೆಸವರಿದರೆ ಬೆನ್ನು ಹತ್ತುತ್ತದಲ್ಲ—ಹಾಗೆ ಅದಕ್ಕೆ ಕಾರಣವಿಷ್ಟೇ. ನಾವು ಹೋದ ದಿನ ಯಾರ ಪರಿಚಯವೂ ಇಲ್ಲದಿದ್ದ ನಾನು ಅವಳೊಡನೆ ಒಂದೆರಡು ಮಾತಾಡಿದ್ದೆ. ಸರಿ, ಒಳ್ಳೆಯ ಮಾತುಗಳನ್ನು ಕೇಳುವುದೇ ಅಪರೂಪವಾಗಿದ್ದ ಅವಳನ್ನೊಲಿಸಿಕೊಳ್ಳಲು ಅಷ್ಟೇ ಸಾಕಾಗಿತ್ತು. ನನಗೆ ಬೇಕಾದುದನ್ನು ಒಳಗಿನಿಂದ ತರುವುದು; ಹಿಂದೆ ಮುಂದೆ ತಿರುಗುವುದು; ನಾನು ಕೂತಲ್ಲಿ ಕೂಡುವುದು—ಹೀಗೆ ಒಂದಲ್ಲ, ನೂರು ವಿಧಗಳಲ್ಲಿ ಅವಳು ತನ್ನೊಲುಮೆಯನ್ನು ಪ್ರದರ್ಶಿಸುತ್ತಿದ್ದಳು. ಅವಳ ತಂದೆ—ಪಾಪ ಮುದುಕರು—ಅವಳನ್ನು ನೋಡಿ 'ಏನಮ್ಮಾ, ಪಾರೂ, ಅವರ ಜೊತೇಲೇ ಅವರೂರಿಗೆ ಹೊರಟುಹೋಗ್ತೀಯಾ? ಎಂದು ತಮಾಷೆ ಮಾಡುವರು. ಆಗೊಮ್ಮೆ ಅವಳು ಹಲ್ಲುಕಿರಿದರೆ ಆ ಕರೀ ಮುಖದಲ್ಲಿ ಬಿಳೀಹಲ್ಲುಗಳ ಸಾಲು ಒಡೆದುಕಾಣುವುದು....

ಕಿಟ್ಟಣ್ಣ ಅವಳೊಡನೆ ಹಾಡಲು ಹೇಳಿದ. ನಾನೂ ಅವನ ಮನೋಭಾವವರಿತು 'ಹೇಳಮ್ಮಾ ವಾರೂ' ಎಂದೆ. ನನ್ನ ಮಾತು ಮೀರುವಂತಿಲ್ಲ. 'ನನಗೆ ಆರತಿ ಎತ್ತೋ ಹಾಡು ಬರೋದಿಲ್ಲ—ಬೇರೆ ಹೇಳಲೇ?' ಎಂದಳು. ನಾನೆಲ್ಲಿ ಬೇಡವೆನ್ನುವೆನೋ ಎಂದು ಕಿಟ್ಟಣ್ಣ 'ಪರವಾ ಇಲ್ಲ-ಏನಾದರೊಂದು ಹೇಳಿಬಿಡು' ಎಂದ. ನಾನೂ 'ಹೂಂ—ಹೇಳು' ಎಂದೆ.

ಅವಳು ಹೇಳತೊಡಗಿದಳು:—

**'ಪರಮಾತ್ಮಾ ಹರೇ—ಪಾವನನಾಮಾ......**

ನಾವು ಆ ಕೀರ್ತನೆಯನ್ನು ಎಷ್ಟು ಸಾರಿ ಕೇಳಲಿಲ್ಲ! ಅದೂ ಹೆಸರಾದ ಸಂಗೀತಗಾರರ ಕೊರಳಿನಿಂದ!! ಅವರ ವಿದ್ವತ್ತೂ, ಶಬ್ದ ಚಮತ್ಕಾರವೂ ವಾರುವಿನ ಕೊರಳಿಗಿರಲಿಲ್ಲ; ಹೌದು. ಆದರೆ ಆ ಸ್ವರ, ಆ ಮಾಧುರ್ಯ, ಹೃದಯವನ್ನು ಕದಡಿಬಿಡುವ ಆ ಶಕ್ತಿ ಅದೆಲ್ಲಾ ನಾವು ನೂರಾರು ಸಾರಿ ಕೇಳಿ ಹಳೆಯದು ಎಂದು ಬಿಟ್ಟಿದ್ದ ಆ ಕೀರ್ತನೆಯಲ್ಲಿ ತುಂಬಿ ಹರಿಸಿದ್ದಳು ವಾರು. 'ಪರಮಾತ್ಮಾ ಹರೇ—ಪಾವನ ನಾಮಾ...

ನಮ್ಮ ಮೆಚ್ಚಿಗೆಯ ಅರಿವಿಲ್ಲದೆಯೇ ಅವಳು ಹಾಡುತ್ತಿದ್ದಳು. ಯಾವಾಗಲೂ ನೆಲವನ್ನು ನೋಡುವ ಅವಳ ನೋಟವು ಅವಳ ಪರಿವೆಯಿಲ್ಲದೆಯೇ ಪರಮಾತ್ಮನನ್ನು ನೋಡುತ್ತಿದೆಯೋ ಏನೋ ಎಂಬಂತೆ ಆಕಾಶದ ಕಡೆ ನೋಡುತ್ತಿತ್ತು. ಅವಳನ್ನು ಕುರೂಪಿ ಎಂದು ಹೇಳಿದೆನಲ್ಲ! ಎಂತಹ ಹುಚ್ಚು ನನಗೆ! ಅವಳ ಆ ಸೌಂದರ್ಯದಿಂದ ತುಂಬಿದ ಹೃದಯದ ಕನ್ನಡಿಗಳಂತಿದ್ದ ಆ ಎರಡು ಕಣ್ಣುಗಳೇ ಸಾಲವೆ? ಆ ಸರ್ವ-ಸಾಮಾನ್ಯ ಮುಖಕ್ಕೆ ಸ್ವರ್ಗೀಯ ಸೌಂದರ್ಯವನ್ನು ಕೊಟ್ಟಿದ್ದ ಆ ಕಣ್ಣುಗಳನ್ನು ನೋಡದೆ ಅವಳು ಕುರೂಪಿ ಎಂದುಕೊಂಡಿದ್ದೆನಲ್ಲ—ಎಂತಹ ಅಕ್ಷಮ್ಯ ಮೂಢತನ! ಬಿಳಿ ಚರ್ಮ, ಉದ್ದವಾದ ಕೇಶರಾಶಿ, ಎಳಸು ಮೂಗು, ಚಂದುಟಿಗಳು—ಇವೆಲ್ಲಾ ಇದ್ದರೇನೇ ಸೌಂದರ್ಯವೆಂದಿದ್ದ ನನ್ನ ಭಾವನೆ ಕ್ಷಣಮಾತ್ರದಲ್ಲಿ ಬದಲಾಯಿತು. ಸುಂದರವಲ್ಲದ ರೂಪದ ಒಳಗೂ ಅತ್ಯಂತ ಸುಂದರವಾದ ಹೃದಯಗಳಿರುವವು

ಎಂಬುದನ್ನು ಪಾರುವಿನ ಕಣ್ಣುಗಳು ನನಗೆ ತೋರಿಸಿಕೊಟ್ಟವು. ಮತ್ತೆ ಆ ಸುಂದರವಾದ ಹೃದಯ, ರೂಪಸೌಂದರ್ಯದಂತೆ ಬಹು ಬೇಗನೆ ಮಾಸದೆ ಎಂದೆಂದೂ ಸುಂದರವಾಗಿಯೇ ಇರುವುದು ಎಂಬುದರ ಅರಿವನ್ನೂ ನನಗೆ ಮಾಡಿಕೊಟ್ಟವು ಪಾರುವಿನ ಆ ಕಣ್ಣುಗಳೇ.

ಕೂತು ಬೇಸತ್ತಿದ್ದ ಕಿಟ್ಟಣ್ಣನ ಬೇಸರವೆಲ್ಲಿ ಹೋಯ್ತೋ? ಆ ಹಾಡು ಮುಗಿಯುವುದೇ ತಡ 'ಇನ್ನೊಂದು ಹೇಳಮ್ಮಾ' ಎಂದ. ನಾನು ತಿಳಿದುಕೊಂಡಿದ್ದೆ 'ನಂಗೆ ಬರೋದಿಲ್ಲ ಇನ್ನು—ಗಂಟಲು ಸರಿಯಾಗಿಲ್ಲ—ಈಗ ಸಾಕು' ಎಂದೇನಾದರೂ ಹೇಳುವಳೋ ಎಂದು. ಒಂದೂ ಇಲ್ಲ. ಕಿಟ್ಟಣ್ಣ ಹೇಳೆಂದುದೇ ತಡ, ನನ್ನ ಮುಖ ನೋಡಿದಳು 'ಹೇಳಲೇ?' ಎಂದು ಕೇಳುವಂತೆ. ನಾನು ಮಾತನಾಡಲಾರದೆ 'ಹೂಂ' ಎಂದು ತಲೆ ಅಲ್ಲಾಡಿಸಿದೆ. ಅವಳು ಪುನಃ ಹೇಳಿದಳು.

**'ನಾನ್ಯಾಕೆ ಬಡವಾನೈಯ್ಯಾ—'**

ಇದೂ ನಾವು ನೂರಾರು ಸಾರಿ ಕೇಳಿ ಕೇಳಿ ಬೇಸತ್ತ ಕೀರ್ತನೆಯೇ. ಆದರೂ ಪಾರುವಿನ ಕೊರಳಿನಿಂದ ಹೊರಡುವಾಗ......!

ಅದು ಮುಗಿದ ಮೇಲೆ ಇನ್ನೂ ಹೇಳಿಸಬೇಕೆಂದು ಕಿಟ್ಟಣ್ಣನಿಗೆ ಆಸೆ. ನನಗೂ ಇರಲಿಲ್ಲವೆಂತಲ್ಲ. ಆದರೆ ನೋಡಿ, ಅವಳು ದರಿದ್ರ ಗುಮಾಸ್ತರ ಕುರೂಪಿ ಮಗಳು. ಕಿಟ್ಟಣ್ಣನ ಮಡದಿ—ಜಮೀನ್ದಾರರ ಏಕಮಾತ್ರ ಪುತ್ರಿ ಹಾರ್ಮೋನಿಯಮ್‌ನೊಡನೆ ಹಾಡಿ ಕಿಟ್ಟಣ್ಣನಿಗೆ ತಾಂಬೂಲಾದಿಗಳನ್ನು ಕೊಡಬೇಕಾಗಿರುವಾಗ ಇವಳಿಗೆ ಪ್ರಾಶಸ್ತ್ಯವನ್ನು ಕೊಟ್ಟು ಹಾಡಿಸುತ್ತಿರುವುದೇ?

ಅರಸಿನ ಕುಂಕುಮ ತಾಂಬೂಲಾದಿಗಳನ್ನು ಹಂಚುವ ಸಂಭ್ರಮಗಳು ತೀರುವಾಗ ಪಾರು ಹೊರಟುಹೋಗಿದ್ದಳು. ಮರುದಿನ ಬಂದಿದ್ದರೂ ನಮಗೆ ಜಮೀನದಾರರ ಬಂಧು ಮಿತ್ರಾದಿಗಳ ಮನೆಗೆ ಔತಣಾದಿಗಳಿಗೆ ಹೋಗುವ ಸಂಭ್ರಮದಲ್ಲಿ ಹಾಡಿಸಲು ಸಮಯವಿಲ್ಲ; ಕೆಲಸದ ಗಲಾಟೆಯಲ್ಲಿ ಅವಳಿಗೂ ಪುರುಸೊತ್ತಿಲ್ಲ. ಕಿಟ್ಟಣ್ಣನಂತೂ 'ಪಾರೂ

ಕಂ ಬ ನಿ ಹತ್ತಿರ ಹಾಡಿಸಬೇಕು. ಅವಳು ಬಂದರೆ ಇಲ್ಲಿಗೆ ಕರೆದುಕೊಂಡು ಬಾ' ಎಂದು ಅನೇಕ ಸಾರಿ ಹೇಳಿದ. ಆದರೆ ಹೇಳಿದೆನಲ್ಲ, ಗಡಿಬಿಡಿಯಲ್ಲಿ ಆಗಲೇ ಇಲ್ಲ. ಅಂತೂ ನಾವು ಹೊರಡುವ ತನಕವೂ ಪುನಃ ಅವಳಿಂದ ಹಾಡಿಸಲು ಏನೇನೋ ಕಾರಣಗಳಿಂದ ಆಗಲೇ ಇಲ್ಲ; ಹಾಗೆಯೇ ಹೊರಟುಬಿಟ್ಟೆವು.

ನಮ್ಮನ್ನು ಕಳುಹಿಸಲು ಬಂದಿದ್ದವರೊಡನೆ ಅವಳೂ ಬಸ್ಸಿನ ತನಕ ಬಂದಿದ್ದಳು. ಬಸ್ಸು ಹತ್ತುವಾಗ 'ಹೋಗಿ ಬರ್‍ತೇನೆ ಪಾರು; ನಿನ್ನ ಮದ್ವೆಗೆ ನಂಗೆ ಕಾಗ್ದಾ ಹಾಕ್ಸು' ಎಂದೆ. ಅಲ್ಲೇ ನಿಂತಿದ್ದ ಅವಳ ತಂದೆ 'ಹಾಕ್ದೇ ಇರ್‍ತೀವ್ಯೇ—ಆದರೆ ನೋಡ್ತಾಯಿ—ಲಗ್ನಕ್ಕೂ ದಿನ ಬರ್‍ಬೇಕಲ್ಲಾ' ಎಂದು ನಿಟ್ಟುಸಿರು ಬಿಟ್ಟರು.

❖ ❖ ❖ ❖

ಎರಡು ವರ್ಷಗಳ ತರುವಾಯ ಕಿಟ್ಟಣ್ಣನ ಹೆಂಡತಿ—ಅತ್ತಿಗೆ ತೌರೂರಿಗೆ ಹೋಗಿದ್ದಾಗ ಪಾರುವಿನ ಮದುವೆಯಾಯಿತಂತೆ. ನನಗೂ ಕಾಗದ ಬಂದಿತ್ತು. ಏನೇನೋ ಸಂದರ್ಭಗಳಿಂದ ಹೋಗಲಾಗಲಿಲ್ಲ. ಅತ್ತಿಗೆ ಹಿಂತಿರುಗಿ ಬಂದ ಮೇಲೆ ಅವಳಿಂದ ಪಾರುವಿನ ಸುದ್ದಿ ಎಲ್ಲಾ ಕೇಳಿ ತಿಳಿದುಕೊಂಡೆ. ಅತ್ತಿಗೆಯ ಹೇಳಿಕೆ: ದರಿದ್ರ ಗುಮಾಸ್ತರ ಕುರೂಪಿ ಮಗಳಿಗೆ ಅವಳಯೋಗ್ಯತೆಯನ್ನು ಮೀರಿದ ವರನೇ ದೊರೆತನೆಂದು. ಆದರೆ ಅಷ್ಟರಿಂದ ನನಗೆ ತೃಪ್ತಿಯಿಲ್ಲ. ಬಿಡಿಸಿ ಕೇಳಿದೆ. ಅವಳು ಹೇಳಿದ ಮಾತುಗಳಿವು. 'ಹೌದು, ಅವಳಿಗೆ ಮದುವೆಯಾಯಿತು. ಆ ಕುರೂಪಿಗೆ ಯೋಗ್ಯನಾದ ವರನೆಲ್ಲಿ ದೊರೆಯಬೇಕು ಹೇಳು—ಅದೂ ವರದಕ್ಷಿಣೆ ಒಂದು ಕಾಸೂ ಇಲ್ಲದೆ. ಅದೇನೋ ಅವಳ ಪೂರ್ವಜನ್ಮದ ಸುಕೃತ. ಅದೇ ಸ್ವಲ್ಪ ಕ್ಷಯದವನಾದರೂ ಊಟಬಟ್ಟೆಗಳಿಗೆ ಕೊರತೆ ಇಲ್ಲದಷ್ಟು ಇರುವಾತ, ಎರಡು ಖರ್ಚನ್ನೂ ವಹಿಸಿಕೊಂಡು ಅವಳನ್ನು ಮದುವೆಯಾದ. ಗಂಡನ ಮನೆಯಲ್ಲಿ ಅತ್ತೆ ಮಾವ ಯಾರೂ ಇಲ್ಲ. ಗಂಡನನ್ನು ಸ್ವಲ್ಪ ಆರೈಕೆ ಮಾಡಿಕೊಂಡಿದ್ದರೆ ಸರಿ—ಉಂಡುಟ್ಟು ಸುಖವಾಗಿರಲು ಯಾವ ತೊಂದರೆಯೂ ಇಲ್ಲ. ನಿಜವಾಗಿಯೂ ಪಾರು ಭಾಗ್ಯಶಾಲಿನಿ'—

ಜಮೀನದಾರರ ಏಕಮಾತ್ರ ಪುತ್ರಿ. ಒಳ್ಳೆ ಸಂಪಾದನೆ ಇರುವ ಡಾಕ್ಟರ್ ಕೃಷ್ಣಸ್ವಾಮಿಯ ಹೆಂಡತಿ. ತನ್ನಪ್ಪನ ದರಿದ್ರ ಗುಮಾಸ್ತರ ಮಗಳು ಪಾರುವನ್ನು ವರದಕ್ಷಿಣೆ ಖರ್ಚು-ವೆಚ್ಚ ಒಂದೂ ಇಲ್ಲದೆ, ಕ್ಷಯರೋಗಿಯಾದರೇನು? ಉಂಡುಡಲು ಬೇಕಾದಷ್ಟಿರುವಾತ ಮದುವೆಯಾದುದನ್ನು ನೋಡಿ ಅದು ಅವಳ ಭಾಗ್ಯ ಎಂದು ತಿಳಿದುಕೊಂಡರೆ ತಪ್ಪೇನು ಹೇಳಿ?

ಹೌದು, ಅದು **ಅವಳ ಭಾಗ್ಯ**—!

ಫೆಬ್ರುವರಿ ೧೯೩೯

# ಕೌಸಲ್ಯಾನಂದನ

ಮನೆಯಿಂದ ಅಣ್ಣಾ ಕಾಗದ ಬರೆದಿದ್ದರು: 'ಇಲ್ಲೆಲ್ಲ ಸಿಡು ಬಿನ ಗಲಾಟೆ ಬಹಳ ಜೋರಾಗಿದೆ. ಈ ರಜೆಯಲ್ಲಿ ಮನೆಗೆ ಬರಬೇಡ, ಅಲ್ಲೇ ಇರು. ಕ್ರಿಸ್‌ಮಸ್ ರಜಾ ಸಿಕ್ಕಿದಾಗ ಬಂದು ಕರೆದುಕೊಂಡು ಬರುತ್ತೇನೆ.'

ಬಹಳ ದಿನಗಳಿಂದ ಬಯಸಿ ಹಂಬಲಿಸಿದ ರಜೆಗೆ ಒಂದೇ ವಾರ ಬಾಕಿ ಇತ್ತು. ಹುಡುಗಿಯರೆಲ್ಲಾ ಊರಿಗೆ ಹೊರಡುವ ಸನ್ನಾಹ ಮಾಡುತ್ತಿದ್ದರು. ನಾನಂತೂ ಎಲ್ಲರಿಗಿಂತ ಮೊದಲೇ ಪುಸ್ತಕಗಳನ್ನೂ ಬಟ್ಟೆಗಳನ್ನೂ ಕಟ್ಟಿ ಮುಗಿಸಿದ್ದೆ. ರಜಾ ದಿನಗಳನ್ನು ಹೇಗೆ ಕಳೆಯಬೇಕು, ಏನೇನು ಮಾಡಬೇಕು ಎಂದು ಯೋಚಿಸಿ ಸಂತೋಷ ಪಡುತ್ತಿದ್ದಾಗ ಈ ಕಾಗದ! ಅಮ್ಮ, ಅಣ್ಣಾ, ಚಿಕ್ಕ ಮೋಹನ ಎಲ್ಲರನ್ನೂ ನೋಡಬೇಕೆಂದಿದ್ದ ಆಶೆ ನಿರಾಶೆ. ಓದಿ ಬಹಳ ಬೇಸರವಾಯ್ತು. ಆಗ ರೂಮಿನಲ್ಲಿ ಯಾರೂ ಇಲ್ಲದುದರಿಂದ ಕಣ್ಣೀರಿಗೂ ತಡೆಯುಂಟಾಗಲಿಲ್ಲ. ಹಾಗೆಯೇ ಮಂಚದ ಮೇಲೆ ಬಿದ್ದುಕೊಂಡು, ಹುಡುಗಿಯರೆಲ್ಲ ಹೋದ ಮೇಲೆ 'ಹೇಗಪ್ಪಾ ದಿನಗಳನ್ನು ಕಳೆಯಲಿ' ಎಂದು ಚಿಂತಿಸತೊಡಗಿದೆ. ಅಷ್ಟರಲ್ಲಿ ಲಿನ್ನಿ ಬಂದಳು. ಅವಳ ಹೆಸರು ವಸಂತಿ. ಆದರೆ ಮೊದಲವಳು ಶಾಲೆಗೆ ಬಂದು ಸೇರಿದಾಗ ವಿನೋದ, ತೆಳ್ಳಗಿದ್ದ ಅವಳನ್ನು ನೋಡಿ 'ಲೀನಿ' ಎಂದು ತಮಾಷೆ ಮಾಡಿದ್ದಳು. ಅಂದಿನಿಂದ ಅವಳಿಗೆ ಲೀನಿ, ಲಿನ್ನಿ ಎಂಬ ಹೆಸರು ಸ್ಥಿರವಾಗಿಹೋಯ್ತು. 'ವಸಂತಿ ಎಂದರೆ ಯಾವ ವಸಂತಿ?' ಎಂದು

ಎಲ್ಲರೂ ಕೇಳುತ್ತಿದ್ದರು. ಕೊನೆಕೊನೆಗೆ ಉಪಾಧ್ಯಾಯಿನಿಯರಿಗೂ ಅದೇ ಪಾಠವಾಗಿ ವಸಂತಿ ಎಂಬ ಹೆಸರೇ ಮರೆತುಹೋಗಿತ್ತು.

ಲಿನ್ನಿ ಬಲು ಚುರುಕು ಹುಡುಗಿ. ಎಲ್ಲರೂ ಅವಳಿಗೆ ಸ್ನೇಹಿತರು. ಮನಸ್ಸು ಮಾಡಿದ್ದರವಳು ಕ್ಲಾಸಿನಲ್ಲಿ ಮೊದಲನೆಯವಳಾಗಬಹುದಿತ್ತು. ನಮಗಾರಿಗೂ ತಿಳಿಯದಿದ್ದ ಲೆಕ್ಕವನ್ನವಳು ಬಲು ಸುಲಭದಲ್ಲಿ ಮಾಡಿ ಬಿಡುತ್ತಿದ್ದಳು. ಆದರೆ ಅವಳಿಗೆ ಪಾಠಕ್ಕಿಂತ ಆಟದಲ್ಲಿ, ತಂಟೆಯಲ್ಲಿ ಮನಸ್ಸು ಹೆಚ್ಚು. ಮಾಡಬೇಡವೆಂದುದನ್ನು ಮಾಡುವುದಕ್ಕೆ ಬಯಕೆ ಬಹಳ. ನಮ್ಮ ಶಾಲೆಯ ಕಂಪೌಂಡಿನಲ್ಲಿದ್ದ ದೊಡ್ಡ ದೊಡ್ಡ ಮರಗಳ ಮೇಲೆಲ್ಲಾ ಹತ್ತಿ ಅದಕ್ಕಾಗಿ ಎಷ್ಟೋ ಸಾರಿ ಶಿಕ್ಷೆಯನ್ನನುಭವಿಸಿದ್ದಳು. ನಮ್ಮ ಶಾಲೆಯಲ್ಲಿ ಅವಳನ್ನು ಟೆನ್ನಿಸ್ ಆಟದಲ್ಲೂ ಈಜುವುದರಲ್ಲೂ ಮೀರುವವರಿರಲಿಲ್ಲ. ನೋಡುವುದಕ್ಕೆ ಸುಂದರಿಯಲ್ಲದಿದ್ದರೂ ಅವಳ ಸ್ವರ ಬಹಳ ಇಂಪು. ಪ್ರಾರ್ಥನೆಯ ಸಮಯದಲ್ಲಿ ಅವಳು ಹಾಡುವುದನ್ನು ಕೇಳುವಾಗ ಪ್ರಪಂಚವೇ ಮರೆತು ಹೋಗುತ್ತಿತ್ತು. ಸಂಗೀತದ ಸಮಯ ( ಪೀರಿಯಡ್ ) ದಲ್ಲಂತೂ ಅವಳು ಹಾಡುವುದನ್ನು ಕೇಳುವುದಕ್ಕಾಗಿ ಜ್ವರಬಂದ ಹುಡುಗಿಯರು ಸಹ ಹಾಜರಾಗುತ್ತಿದ್ದರು. ಅಷ್ಟು ಇಂಪು ಅವಳ ಸ್ವರ. ಲಿನ್ನಿ ಯಾವಾಗಲೂ ನಗುತ್ತಲೇ ಇರುವಳು. ಅವಳಿಗೆ ಸಿಟ್ಟು ಬಂದುದನ್ನಾಗಲಿ ಅವಳತ್ತುದನ್ನಾಗಲಿ ನಾವಾರೂ ನೋಡಿರಲಿಲ್ಲ. ಯಾವಾಗಲೂ ಏನಾದರೂ ತಂಟೆ ( Mischief ) ಯನ್ನು ಮಾಡುತ್ತಿರುವುದು ಅವಳ ಸ್ವಭಾವ. ಒಂದೇ ಒಂದು ನಿಮಿಷವಾದರೂ ಅವಳು ಸುಮ್ಮನೆ ಕೂರುವುದು ಅಪರೂಪ.

ಅವಳು ನನ್ನ ರೂಮ್ ಮೇಟ್ ( Room Mate ). ಒಳಗೆ ಬಂದು ನಾನು ಮಲಗಿದುದನ್ನು ನೋಡಿ 'ಏನು ಸೀತಾ, ಸೊಂಟ ಮುರಿದು ಹೋಗಿದೆಯೆ ! ಬಿದ್ದುಕೊಂಡಿರುವುದೇಕೆ ?' ಎಂದು ಕೇಳಿದಳು. ಅವಳ ಮಾತು ಕೇಳಿ ನಗು ಬಂತು. ಕಣ್ಣುಗಳನ್ನೊರಸಿಕೊಂಡು ಎದ್ದು ಕೂತೆ. ಅವಳೂ ಬಂದು ನನ್ನಹತ್ತಿರ ಕೂತು 'ಊರಿಂದ ಕಾಗದ ಬಂತೆ ?' ಎಂದು



ಕಾ ಸಲ್ಯಾನಂದಸ

ಕೇಳಿದಳು. ಮೇಜಿನಮೇಲಿದ್ದ ಅಣ್ಣನ ಕಾಗದವನ್ನು ತೆಗೆದು ಅವಳಿಗೆ ಕೊಟ್ಟೆ. ಓದಿ ನೋಡಿ 'ನಮ್ಮನೆಗೆ ಬಂದುಬಿಡು ಸೀತಾ. ಇನ್ನೊಂದು ಸಾರಿ ಬರುತ್ತೇನೆ, ಮತ್ತೊಂದು ಸಾರಿ ಬರುತ್ತೇನೆ ಎಂದು ಸುಳ್ಳು ನೆವನಗಳನ್ನು ಹೇಳುತ್ತಿದ್ದೆ. ಈ ರಜೆಯಲ್ಲಿ ಹೇಗಿದ್ದರೂ ಊರಿಗೆ ಹೋಗುವಂತಿಲ್ಲ, ಬಂದುಬಿಡು. ಇಲ್ಲವೆಂದರೆ ನಿನ್ನೊಡನೆನ್ನು ಮಾತಾಡುವುದಿಲ್ಲ' ಎಂದಳು. ಎಲ್ಲರೂ ಹೋದ ಮೇಲೆ ನಾನೊಬ್ಬಳೇ ಇರಬೇಕಲ್ಲಾ ಎಂದು ಬಹಳ ಬೇಸರವಾಗಿತ್ತು. ಲಿನ್ನಿಯೂ ಬಹಳ ದಿನಗಳಿಂದ ತನ್ನ ಮನೆಗೆ ಬರಬೇಕೆಂದು ಕರೆಯುತ್ತಿದ್ದಳು. ಒಬ್ಬಳೇ ಇರುವುದಕ್ಕಿಂತ ಲಿನ್ನಿಯೊಡನೆ ಹೋಗುವುದೆ ಲೇಸೆಂದು 'ಆಗಲಿ' ಎಂದೆ. ಅವಳಿಗೆ ಬಹಳ ಸಂತೋಷವಾಯಿತು. ಎಲ್ಲ ಹುಡುಗಿಯರೂ ಅವಳಿಗೆ ಸ್ನೇಹಿತರಾಗಿದ್ದರೂ ನಾನೆಂದರೆ ಅವಳಿಗೆ ಹೆಚ್ಚಿನ ಪ್ರೀತಿ. ನನಗಿಂತಲೂ ಅವಳು ಒಂದು ವರ್ಷ ಹಿರಿಯಳು. ದೊಡ್ಡ ಹುಡುಗಿಯರು ನನ್ನನ್ನು ಕೀಟಲೆಮಾಡುವಾಗ ನನ್ನ ಸಹಾಯಕ್ಕೆ ಯಾವಾಗಲೂ ಲಿನ್ನಿ ಬರುತ್ತಿದ್ದಳು. ಲಿನ್ನಿ ನನ್ನ ಪಕ್ಷವೆಂದು ತಿಳಿದ ಕೂಡಲೇ ಬೇರೆಯವರು ನನ್ನ ತಂಟೆಗೆ ಬರುವುದು ಕಮ್ಮಿಯಾಗಿತ್ತು. ಮೊದಲು ಮನೆಯವರನ್ನು ಬಿಟ್ಟು ಬಂದಾಗ ಉಂಟಾದ ಬೇಸರವು ಲಿನ್ನಿಯ ಸಹವಾಸದಿಂದ ಬಹಳಮಟ್ಟಿಗೆ ಕಮ್ಮಿಯಾಗಿತ್ತು. ದಿನಗಳು ಕಳೆದಂತೆ ನನಗವಳು ಒಡಹುಟ್ಟಿದ ಅಕ್ಕನಿಗಿಂತಲೂ ಆತ್ಮೀಯಳಾಗಿಬಿಟ್ಟಿದ್ದಳು. ಏನಾದರೂ ನಾನವಳಿಗೆ ಹೇಳದಿರುತ್ತಿರಲಿಲ್ಲ. ಕಳೆದ ರಜೆಯಲ್ಲಿ ನಮ್ಮ ಮನೆಗೆ ಬಂದು ಅಮ್ಮನ ಒಲುಮೆಯನ್ನೂ ಅಣ್ಣನ ಆದರವನ್ನೂ ಮೋಹನನ ಪ್ರೀತಿಯನ್ನೂ ಅಪಹರಿಸಿಬಿಟ್ಟಿದ್ದಳು. ಯಾರಾದರೂ ಸರಿ. ಲಿನ್ನಿಯನ್ನು ಪ್ರೀತಿಸದಿರುವುದಕ್ಕಾಗುತ್ತಿರಲಿಲ್ಲ. ಎಲ್ಲರನ್ನೂ ಒಲಿಸಿಕೊಳ್ಳುವಂಥ ಸುಂದರ ಗುಣಗಳು ನನ್ನ ಲಿನ್ನಿಯಲ್ಲಿದ್ದವು. ಆದುದರಿಂದಲೇ ಲಿನ್ನಿ ಪಾಠ ಕಲಿಯದೇ ತಮಾಷೆಯಲ್ಲೇ ಕಾಲ ಕಳೆದಾಗ ಶಿಕ್ಷೆಯನ್ನು ವಿಧಿಸಬೇಕೆಂದಿದ್ದ ಉಪಾಧ್ಯಾಯಿನಿ (ಮದರ್) ಅವಳ ಮುಖ ನೋಡಿ ಶಿಕ್ಷೆಮಾಡಲು ಮನವೊಪ್ಪದೆ ಎಷ್ಟೋ ಸಾರಿ ಅವಳನ್ನು ಕ್ಷಮಿಸಿಬಿಟ್ಟಿದ್ದರು.

ಲಿನ್ನಿ ಊರಿಗೆ ಬರುತ್ತೇನೆಂದು ಬರೆದುದಕ್ಕಿಂತಲೂ ಒಂದು ದಿನ ಮುಂದಾಗಿ ನಾವು ಹೊರಟೆವು. ನಾವು ಆದಿನ ಬರುವುದು ಅವರ ಮನೆಯವರಿಗೆ ತಿಳಿದಿರಲಿಲ್ಲವಾದ್ದರಿಂದ ಸ್ಟೇಶನ್‌ದಲ್ಲಿ ನಾವು ರೈಲಿನಿಂದಿಳಿಯುವಾಗ ನಮ್ಮನ್ನು ಕರೆದುಕೊಂಡು ಹೋಗುವುದಕ್ಕೆ ಯಾರೂ ಬಂದಿರಲಿಲ್ಲ. ಸ್ಟೇಶನ್‌ದಿಂದ ಲಿನ್ನಿಯ ಮನೆಗೆ ಮೂರು ಮೈಲಿ ದೂರ. ಕಾನ್ವೆಂಟಿನಲ್ಲಿ ಜೈಲಿನಲ್ಲಿದ್ದವರಂತೆ ಇದ್ದವರಿಗೆ ಅನಾಯಾಸವಾಗಿ ಮೂರು ಮೈಲು ನಡೆಯುವುದಕ್ಕೆ ಅದೊಂದು ಸೌಭಾಗ್ಯದಂತೆ. ಲಿನ್ನಿಯ ಪರಿಚಯದವರು ಸ್ಟೇಶನ್ ಮಾಸ್ಟರ್. ಅವರು ಕಾರು ಮಾಡಿ ಕೊಡುತ್ತೇನೆಂದರೂ ಬೇಡವೆಂದು ಹಾಸಿಗೆ ಪೆಟ್ಟಿಗೆಗಳನ್ನವರ ಸ್ವಾಧೀನಕ್ಕೆ ಕೊಟ್ಟು ಹೊರಟೆವು. ಕಾಡುಗಳ ನಡುವಿನಿಂದ, ತೋಟಗಳ ಮಧ್ಯದಿಂದ ತೋಡುಗಳನ್ನು ದಾಟಿಕೊಂಡು ಓಡುತ್ತಾ ಕೂರುತ್ತಾ, ಕಂಡ ಕಂಡ ಕಾಡುಹೂಗಳನ್ನು ಕೀಳುತ್ತಾ, ಹೇಗೆ ದಾರಿ ಮುಗಿಯಿತೆಂಬುದೇ ತಿಳಿಯದಷ್ಟು ಬೇಗ ಲಿನ್ನಿಯ ಮನೆಯ ಹತ್ತಿರ ತಲುಪಿದೆವು. ಆಗ ಬೆಳಗಿನ ಒಂಬತ್ತು ಗಂಟೆಯಾಗಿತ್ತು. ಬಿಸಿಲಿನ್ನೂ ಹೆಚ್ಚಾಗಿರಲಿಲ್ಲ. ಅವರ ಮನೆ ಎತ್ತರವಾದ ಒಂದು ಗುಡ್ಡದ ಮೇಲಿತ್ತು. ಮನೆಗೆ ಹೋಗಬೇಕಾದರೆ ಮರಗಳ ಗುಂಪೊಂದನ್ನು ದಾಟಿ ಹೂವಿನ ತೋಟದ ನಡುವಿನಿಂದ ಹೋಗಬೇಕಾಗಿತ್ತು. ಮರಗಳ ಹತ್ತಿರ ಬಂದಿದ್ದೆವು. ಒಂದು ಮರದಡಿಯಲ್ಲಿ ಬಿದ್ದಿದ್ದ ಮರದ ಕುಂಟೆಯೊಂದರ ಮೇಲೆ ಯಾರೊ ಒಬ್ಬನು ಕೂತು Fitzgerald ನ 'ಉಮರ್ ಖಯ್ಯಾಮ್' ಗಟ್ಟಿಯಾಗಿ ಓದುತ್ತಿದ್ದನು. ರಸ್ತೆಯ ಕಡೆ ಬೆನ್ನುಮಾಡಿ ಕೂತಿದ್ದುದರಿಂದ ಅವನ ಮುಖ ನಮಗೆ ಕಾಣಿಸುತ್ತಿರಲಿಲ್ಲ. ಅವನನ್ನು ನೋಡಿ ಲಿನ್ನಿ ಶಬ್ದ ಮಾಡದಂತೆ ನನಗೆ ಸಂಜ್ಞೆ ಮಾಡಿ, ಮೆಲ್ಲ ಮೆಲ್ಲನೆ ಹಿಂದಿನಿಂದ ಹೋಗಿ ಅವನ ಕಣ್ಣುಗಳನ್ನು ಮುಚ್ಚಿದಳು. ಕೂತಿದ್ದಾತನು ಒಮ್ಮೆ ಫಕ್ಕನೆ ಬೆಚ್ಚಿಬಿದ್ದು ಕಣ್ಣುಗಳನ್ನು ಮುಚ್ಚಿದ್ದ ಲಿನ್ನಿಯ ಕೈಗಳನ್ನು ಹಿಡಿದು ನೋಡಿ ಬಹು ಮೆಲ್ಲನೆ 'ವಸಂತ' ಎಂದನು. ನಗುತ್ತಾ

ಲಿನ್ನಿ ಅವನ ಕಣ್ಣು ಬಿಟ್ಟು 'ನಾನೆಂದು ಹೇಗೆ ತಿಳಿಯಿತು ರಾಮು?' ಎಂದಳು.

'ಪಾಪ, ನಿನ್ನ ಕೈಗಳ ಪರಿಚಯವೇ ನನಗೆ ಇಲ್ಲ ಅಲ್ಲವೇ?' ಎಂದವನು ನಕ್ಕು 'ಇದೇನು ವಸಂತ, ನಾಳೆ ಬರುವುದೆಂದು ಸುಳ್ಳೇಕೆ ಬರೆದೆ?' ಎಂದು ಕೇಳಿದ.

'ನೋಡಿದೊಡನೆಯೇ ಸುರುಮಾಡಿದೆಯಲ್ಲ ಸುಳ್ಳು ಹೇಳುವವಳು ಎಂದು ಜಗಳಕ್ಕೆ? ನಾವು ಊಹಿಸಿದುದಕ್ಕಿಂತಲೂ ಒಂದು ದಿನ ಮುಂದಾಗಿ ರಜ ಸಿಕ್ಕಿತು. ಇನ್ನೊಂದು ದಿನ ತಡೆದಿದ್ದರೆ ನಿನ್ನನ್ನು ಈಗ ನೋಡಲಾಗುತ್ತಿತ್ತೇ?......'

ಲಿನ್ನಿ ಮಾತಿನ ಸಂಭ್ರಮದಲ್ಲಿ ನನ್ನನ್ನು ಮರೆತಿದ್ದಳು. ಅವರಿಬ್ಬರು ಮಾತನಾಡುವಾಗ ಮಧ್ಯ ಹೋಗುವುದು ನನಗೂ ಸರಿಯಾಗಿ ತೋರಲಿಲ್ಲ. ಅವರ ಕಡೆ ಬೆನ್ನು ಹಾಕಿ ನಿಂತು ಬಹು ದೂರದವರೆಗೂ ಮರಗಳ ಸಂದಿನೊಳಗಿಂದ ಹರಿದುಹೋಗುತ್ತಿಪ್ಪಂತೆ ಕಾಣಿಸುತ್ತಿದ್ದ ರಸ್ತೆಯನ್ನು ನೋಡತೊಡಗಿದೆ. ಕಣ್ಣುಗಳು ರಸ್ತೆಯನ್ನು ನೋಡುತ್ತಿದ್ದರೂ ಮನಸ್ಸು ಕೇಳುತ್ತಿತ್ತು: 'ಈ ರಾಮು ಯಾರು! ಲಿನ್ನಿ ನನಗಿವನ ಸುದ್ದಿಯನ್ನು ಇಂದಿನವರೆಗೂ ಹೇಳಲಿಲ್ಲವೇಕೆ?' ಎಂದು ಮುಂತಾಗಿ. ಎಷ್ಟು ಹೊತ್ತು ಹೇಗೆ ನಿಂತಿದ್ದೆನೋ ತಿಳಿಯದು. ನಾಯಿಯೊಂದು ಬೊಗಳುತ್ತಾ ನನ್ನ ಕಡೆ ಓಡಿಬರುವುದನ್ನು ನೋಡಿ ಭಯದಿಂದ 'ಲಿನ್ನೀ' ಎಂದು ಕಿರುಚಿಕೊಂಡೆ. ಲಿನ್ನಿ ಒಬ್ಬಳೇ ಎಂದಿದ್ದ ರಾಮು ನನ್ನ ಕೂಗು ಕೇಳಿ ತಿರುಗಿ ನೋಡಿದ. ಮಾತಿನಲ್ಲಿ ಮುಳುಗಿದ್ದ ಲಿನ್ನಿಗೂ ನಾನು ಇದ್ದೇನೆಂಬ ಸ್ಮೃತಿಯುಂಟಾಯಿತು. 'ಟೆಡ್ಡಿ–ಟೆಡ್ಡಿ' ಎಂದು ನಾಯಿಯನ್ನು ಹತ್ತಿರ ಕರೆದು ತಲೆ ಸವರುತ್ತಾ 'ರಾಮು, ನನ್ನ ಸ್ನೇಹಿತೆ ಸೀತೆ ಇವಳು' ಎಂದು ನನ್ನ ಕಡೆ ತಿರುಗಿ 'ಸೀತಾ, ರಾಮು ನಿನ್ನಂತೆಯೇ 'ಉಮರ್‌ಖಯ್ಯಾಮ್' ಮತ್ತು 'ಕೌಸಲ್ಯಾನಂದನ' ನ ಕತೆಗಳನ್ನೋದುವ ಹುಚ್ಚರಲ್ಲೊಬ್ಬ' ಎಂದಳು. 'ಕೌಸಲ್ಯಾನಂದನ' ನ ಕತೆಗಳೂ ಉಮರ್‌ಖಯ್ಯಾಮ್‌ನ ಪದ್ಯಗಳೂ ನನ್ನ ಮೆಚ್ಚಿಕೆಯವು. ರಾಮುವೂ ಅವನ್ನು ಮೆಚ್ಚಿದವನೆಂದು ತಿಳಿದು 'ನನಗೂ

ಅವುಗಳೆಂದರೆ ಬಹಳ ಪ್ರೀತಿ' ಎಂದೆ. ಆತ ಮುಗುಳ್ನಗೆ ನಕ್ಕು 'ವಸಂತಗೆ ನನ್ನ ಅವುಗಳ ಮೇಲಿನ ಪ್ರೀತಿ, ಹುಚ್ಚೆಂದು ಚೇಷ್ಟೆ ಮಾಡುವ ಸಾಧನ. ಎಡೆ ಸಿಕ್ಕಿದಾಗಲೆಲ್ಲಾ ನನ್ನನ್ನು ಹುಚ್ಚನೆಂದೆನ್ನುವ ಸುಸಂದರ್ಭವನ್ನು ಅವಳು ಎಂದೂ ಕಳೆದುಕೊಳ್ಳುವುದಿಲ್ಲ' ಎಂದ.

'ನೀವಿಬ್ಬರು ಹುಚ್ಚರೂ ಮಾತಿಗಾರಂಭಿಸಿದರೆ ಕತ್ತಲಾದರೂ ಮುಗಿಯುವಂತಿಲ್ಲ, ಒಳಗೆ ಹೋಗೋಣ' ಎಂದು ಲಿನ್ನಿ ಹೊರಟಳು. ರಾಮುವೂ ಬಲು ಮೆಲ್ಲಗೆ ಹತ್ತಿರದಲ್ಲಿದ್ದ ದೊಣ್ಣೆಯೊಂದರ ಸಹಾಯದಿಂದ ಎದ್ದು ನಿಂತ. ನನ್ನ ಆಶ್ಚರ್ಯದ ಮೇರೆ ಮೀರಿತು. ಅವನ ಒಂದು ಕಾಲು ಕುಂಟು!

೩

ರಾಮು ಲಿನ್ನಿಯ ಸೋದರತ್ತೆಯ ಮಗ. ಚಿಕ್ಕಂದಿನಲ್ಲಿಯೇ ತಂದೆತಾಯಿಯರನ್ನು ಕಳೆದುಕೊಂಡಿದ್ದ ಅವನನ್ನು ಲಿನ್ನಿಯ ತಾಯಿ ತಂದೆಯರೇ ಸಾಕಿದ್ದರು. ಅದಕ್ಕೇ ಅವರಿಬ್ಬರೊಳಗೆ ಅಷ್ಟೊಂದು ಸಲಿಗೆ. ಸಣ್ಣ ಪ್ರಾಯದಿಂದಲೇ ರಾಮುವಿಗೆ ವಸಂತನನ್ನು ಕೊಡುವುದು ನಿಶ್ಚಯವಾದ ವಿಷಯ. ಆದರೆ ರಾಮು I. C. S. ಪರೀಕ್ಷೆಗೆ ಹೋಗಿದ್ದಾಗ ಕುದುರೆಯಿಂದ ಬಿದ್ದು ಒಂದು ಕಾಲು ಕುಂಟಾದಂದಿನಿಂದ, ಅವಳ ತಂದೆತಾಯಿಯರು ಮಗಳನ್ನವನಿಗೆ ಕೊಡಲು ಹಿಂಜರಿಯುತ್ತಿದ್ದರು. ಲಿನ್ನಿ ಮಾತ್ರ ರಾಮುವನ್ನು ಮದುವೆಯಾಗದಿದ್ದರೆ ಮದುವೆಯೇ ಬೇಡ ಎಂದು ದೃಢವಾಗಿಯೇ ಹೇಳಿದ್ದಳು. ಆದರೂ ಅವಳ ತಂದೆತಾಯಿಯರು ಕುಂಟನಿಗೆ ಮಗಳನ್ನು ಕೊಡಲು ಹಿಂದೆಮುಂದೆ ನೋಡುತ್ತಿದ್ದರು. ಆದರಿಂದಲೇ ಎರಡುವರುಷಗಳ ಮೊದಲೇ ಆಗಬೇಕಾಗಿದ್ದ ಲಿನ್ನಿಯ ಮದುವೆ ಇನ್ನೂ ಆಗಿರಲಿಲ್ಲ. ರಾಮು ಕುಂಟನಾದಂದಿನಿಂದ ಅವಳನ್ನು ಮದುವೆಯಾಗಲು ಸಂಕೋಚಪಡುತ್ತಿದ್ದ. ಕುಂಟನಾದ ತನ್ನನ್ನು ಲಿನ್ನಿ ಕರುಣೆಗಾಗಿ ಮದುವೆಯಾಗಬಯಸುವಳೆಂಬ ನಂಬಿಕೆಯಿಂದ ಅವನಿಗೊಂದು ಹುಚ್ಚು—ತಾನು ಜೀವಿಸಲೇ ಯೋಗ್ಯನಲ್ಲವೆಂದು. ಲಿನ್ನಿಯ



ಕಾ ಸಲ್ಯಾನಂದನ
ಕಾ ಬ ನಿ

ನ್ನವನು ಪ್ರೀತಿಸುತ್ತಿದ್ದರೂ ತನ್ನ ವ್ಯವಹಾರಗಳಿಂದ ಎಂದೂ ಆ ಪ್ರೀತಿಯನ್ನು ತೋರಗೊಡುತ್ತಿರಲಿಲ್ಲ. ಅವಳು ಅವನೊಡನೆ ಕೂತು ಮಾತಿಗಾರಂಭಿಸಿದರೆ ಅವಳಿಗೆ ನೋವಾಗುವಂತಹ ಮಾತುಗಳನ್ನಾಡಿ ನೋಯಿಸುತ್ತಿದ್ದ, ಹಾಗಾದರೂ ಲಿನ್ನಿ ತನ್ನನ್ನು ಪ್ರೀತಿಸದಿರಲೆಂದು. ಪಾಪ, ಲಿನ್ನಿ ಅವನ ಕಠೋರವ್ಯವಹಾರದಿಂದ ಬಹಳ ದುಃಖಿತಳಾಗುತ್ತಿದ್ದಳು. ಯಾವಾಗಲೂ ನಗು ತುಂಬಿ ತುಳುಕುತಿದ್ದ ಅವಳ ಕಣ್ಣುಗಳು ಕಣ್ಣೀರುತುಂಬಿರುವುದನ್ನು ನೋಡುವಾಗ 'ತುಂಟಾಟಿಕೆಯ ಲಿನ್ನಿಯ ಹೃದಯಾಂತರಾಳದಲ್ಲಿ ಇಷ್ಟೊಂದು ಪ್ರೇಮ, ಇಷ್ಟೊಂದು ಗಂಭೀರತೆ ಅಡಗಿರಲು ಸ್ಥಳವೆಲ್ಲಿ?' ಎಂದೆನಿಸುತ್ತಿತ್ತು ನನಗೆ. ನಗುವಿನಲ್ಲೇ ಜೀವನವನ್ನು ತೇಲಿಸುತ್ತಿದ್ದ ಲಿನ್ನಿಯ ಮುಖವನ್ನು ವಿಷಾದ ಆವರಿಸಿದಾಗಲೆಲ್ಲ ರಾಮುವಿನ ಮೇಲೆ ಬಹಳ ಕೋಪ ಬರುತ್ತಿತ್ತು. ಹಾಗೇಕೆ ಮಾಡುತ್ತಿರುವೆ ಎಂದವನನ್ನು ಕೇಳಲೇ ಎಂದು ಎಷ್ಟೋ ಸಾರೆ ಯೋಚಿಸಿದೆ. ಆದರೆ ಈ ರೀತಿ ನಾನು ಕೇಳಿದುದು ಲಿನ್ನಿಗೆ ತಿಳಿದರೆ....ಪರಿಣಾಮವನ್ನು ನೆನಸಿ ಸುಮ್ಮನಾಗುತ್ತಿದ್ದೆ.

ಅರ್ಧೋದಯದ ದಿನ ಬಂತು. ಮುಂದಿನ ದಿನವೇ ನಿಶ್ಚಯವಾದಂತೆ ಎಲ್ಲರೂ ಹೊಳೆಗೆ ಸ್ನಾನಕ್ಕೆ ಹೊರಟೆವು. ಹೊಳೆಯು ದೂರವಾದುದರಿಂದ ನಡೆದು ಹೋದರೆ ಸ್ನಾನ ತೀರಿಸಿ ಮನೆಗೆ ಹಿಂತಿರುಗುವುದು ತಡವಾಗುವುದೆಂದು ಕಾರಿನಲ್ಲೇ ಹೋಗಿ ಬರುವುದೆಂದು ನಿಶ್ಚಯವಾಗಿದ್ದುದರಿಂದ ರಾಮುವೂ ಬರಬಹುದಾಗಿತ್ತು. ಲಿನ್ನಿ, ಅವಳ ತಾಯಿ ತಂದೆ, ನಾನು ಎಲ್ಲರೂ ಅವನನ್ನು ಕರೆದುಕೊಂಡು ಹೋಗಬೇಕೆಂದು ಬಹಳ ಪ್ರಯತ್ನಿಸಿದೆವು. "ನಾನು ಬರುವುದಿಲ್ಲ" ಎಂದು ಎಲ್ಲರಿಗೂ ಒಂದೇ ಅವನ ಪ್ರತ್ಯುತ್ತರ. ಹಿಂದಿನ ದಿನ ರಾಮು ಬರಬಹುದೆಂದು ನಂಬಿಕೆಯಿಂದ ಆನಂದದಿಂದ ಹಿಗ್ಗುತ್ತಿದ್ದ ಲಿನ್ನಿಗೆ ಬಹಳ ಬೇಸರವಾಯಿತು. ಅವಳ ಮನೋಭಾವವನ್ನರಿತು ನನಗೂ ರಾಮುವಿನ ಮೇಲೆ ತಡೆಯಲಾರದಷ್ಟು ಕೋಪಬಂತು. 'ಈ ಆತ್ಮಾಭಿಮಾನಿ ಕುಂಟನಲ್ಲೇನು ಗುಣವನ್ನು ಕಂಡು ಲಿನ್ನಿ ಇವನನ್ನಿಷ್ಟು ಪ್ರೀತಿಸುವಳು!' ಎಂದೆನಿಸಿತು.

ಯೋಚಿಸಿದಷ್ಟು ನನ್ನ ಲಿನ್ನಿಗೆ ರಾಮು ಖಂಡಿತವಾಗಿಯೂ ಯೋಗ್ಯನಾದ ವರನಲ್ಲೆಂಬುದು ದೃಢವಾಗುತ್ತಿತ್ತು. ತಂದೆ ತಾಯಿಯರ ಮಾತು ಮೀರಿ ತನ್ನನ್ನು ಪ್ರೀತಿಸುವ ಲಿನ್ನಿಯನ್ನು ರಾಮು ತಿರಸ್ಕರಿಸಿದರೂ ಲಿನ್ನಿ ಸಹಿಸಿಕೊಂಡಿರುವುದನ್ನು ನೋಡುವಾಗ ನನಗೆ ದೃಢವಾಯಿತು: ನಿಜವಾಗಿಯೂ 'ಪ್ರೇಮ ಕುರುಡೆ'ಂದು.

ಲಿನ್ನಿಗೆ ಈಜುವುದೆಂದರೆ ಬಹಳ ಇಷ್ಟ. ಶಾಲೆಯಿಂದ ವನಭೋಜನ (Picnic) ಕ್ಕೆಂದು ಹೊಳೆಯ ತೀರಕ್ಕೆ ಹೋದಾಗಲೆಲ್ಲ ಅವಳನ್ನು ಹೊಳೆಯಿಂದ ಹೊರಕ್ಕೆ ಬರುವಂತೆ ಮಾಡಬೇಕಾದರೆ ಉಪಾಧ್ಯಾಯಿನಿಯರಿಗೆಲ್ಲ ಸಾಕಾಗಿ ಹೋಗುತ್ತಿತ್ತು. ಮನೆಯಿಂದ ಹೊರಡುವಾಗಿದ್ದ ಬೇಸರವನ್ನೆಲ್ಲ ಲಿನ್ನಿ ಹೊಳೆಯನ್ನು ನೋಡುವಾಗ ಮರೆಯುವಳೆಂದಿದ್ದೆ. ನಾನೆಣಿಸಿದಂತೆ ಹೊಳೆಗೆ ತಲುಪಿದ ಮೇಲೂ ಲಿನ್ನಿಗೆ ಯಾವಾಗಲಿನಂತೆ ಉತ್ಸಾಹ ಉಂಟಾಗಲಿಲ್ಲ. ನೀರನ್ನು ನೋಡಿದರೆ ಮೀನಿನಂತೆ ಈಜಾಡುತಿದ್ದವಳು ಐದೇ ನಿಮಿಷಗಳಲ್ಲಿ ಸ್ನಾನವನ್ನು ಪೂರೈಸಿ ದಡಕ್ಕೆ ಬಂದು ಬಿಟ್ಟಳು. ಆ ಕುಂಟನ ಆತ್ಮಾಭಿಮಾನಕ್ಕೆ ಲಿನ್ನಿ ಬಲಿಯಾಗುವುದನ್ನು ನೋಡಿ ನನಗೆ ಸಹಿಸಲಾಗಲಿಲ್ಲ. ಮನೆಗೆ ತಲುಪಿದೊಡನೆಯೆ ಅವನಿಗೆ ಚೆನ್ನಾಗಿ ಅಂಪುಬಿಡಬೇಕೆಂದು ಖಂಡಿತಮಾಡಿಕೊಂಡೆ.

. .

೪

ಲಿನ್ನಿಗಾಗಿ, ಅವಳ ಸುಖಕ್ಕಾಗಿ, ಅವಳ ಮೇಲಿನ ನನ್ನ ಪ್ರೇಮಕ್ಕಾಗಿ ನಾನು ಮಾಡಿದ ನಿಶ್ಚಯದ ಪರಿಣಾಮವು ನನಗೆ ಮೊದಲೇ ತಿಳಿದಿದ್ದರೆ ನಾನೆಂದೂ ರಾಮುವನ್ನು ದೂಷಿಸುವ ಪ್ರಯತ್ನಕ್ಕೆ ಕೈಹಾಕುತ್ತಿರಲಿಲ್ಲ. ನನಗೇನು ಗೊತ್ತು, ನನ್ನ ಮಾತುಗಳ ಫಲಿತಾಂಶವಾಗಿ ರಾಮು ದೇಶಾಂತರಕ್ಕೆ ಹೊರಟು ಹೋಗುವನೆಂದು! ಲಿನ್ನಿಯ ಒಳ್ಳೆಯದಕ್ಕಾಗಿ ಮಾಡಿದ ಯತ್ನದಿಂದ ಅವಳಿಗಿದ್ದ ಕೊಂಚ ಸುಖವೂ ಮಣ್ಣುಪಾಲಾಗಬಹುದೆಂದು ನನಗೆ ಮೊದಲೇ ಗೊತ್ತಾಗಿದ್ದರೆ, ನಾನೆಂದೂ ರಾಮುವಿಗೆ ನಿಷ್ಠುರದ ನುಡಿಗಳನ್ನಾಡುತ್ತಿರಲಿಲ್ಲ. ಆದರೆ ಮುಂದಾಗುವ


ಕಾ ಸಲ್ಯಾನಂದನ
ಕಂ ಬ ನಿ

ಕಂ ಬ ಸಿ

ವಿಷಯಗಳು ತಿಳಿಯುವುದಾದರೆ ಲೋಕದಲ್ಲಿ ಎಷ್ಟೋ ಬದಲಾವಣೆಗಳು ಬಹು ಸುಲಭವಾಗಿ ಆಗಿ ಹೋಗುತ್ತಲಿದ್ದುವು. ಈಗೆಣಿಸುವಾಗ ನಾನು ರಾಮುವನ್ನು ನಿಂದಿಸಿದುದು ತಪ್ಪೆಂದು ತೋರಿದರೂ ಆಗ ನನಗೆ ಅದೇ ಸರಿಯೆಂದು ತೋರಿತ್ತು. ಆ ದಿನ ಲಿನ್ನಿಯ ಸುಖವನ್ನು ಕೋರಿ ನಾನಾಡಿದ ಕೆಲವು ಕ್ರೂರ ಶಬ್ದಗಳು ರಾಮುವನ್ನು ನಿಜವಾಗಿಯೂ ನೋಯಿಸುವಂತಹವುಗಳಾಗಿದ್ದುವು. ಇಲ್ಲದಿದ್ದರೆ ರಾಮು—ಸರಳ ಮನಸ್ಸಿನ ರಾಮು–ಯಾರಿಗೂ ಹೇಳದೆ ಆ ರಾತ್ರಿ–ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ-ಚಿಕ್ಕಂದಿನಿಂದಲೂ ಸಾಕಿ ಸಲಹಿದ ತಾಯಿತಂದೆಯರಿಗಿಂತಲೂ ಹೆಚ್ಚಾದ ಅತ್ತೆ ಮಾವಂದಿರ ಆಶ್ರಯವನ್ನು ಬಿಟ್ಟು ಹೊರಟು ಹೋಗುವಷ್ಟು ಕಠಿನ ಮನಸ್ಸಿನವನಾಗಿರಲಿಲ್ಲ.

ಲಿನ್ನಿಗೆ ಒಳ್ಳೆಯದನ್ನು ಮಾಡಲು ಯತ್ನಿಸಿದ ನಾನು ಕೆಡುಕನ್ನೇ ಮಾಡಿದಂತಾಯಿತು. ರಾಮು ಹೊರಟು ಹೋದುದರ ಕಾರಣವು ಯಾರಿಗೂ ತಿಳಿದಿರಲಿಲ್ಲ. ಹೇಳಲು ನನಗೂ ಧೈರ್ಯವಾಗಲಿಲ್ಲ. ಲಿನ್ನಿಯ ನಗುಮುಖವು ಬಾಡಿರುವುದನ್ನು ನೋಡುವಾಗಲೆಲ್ಲಾ ನನ್ನ ಹೃದಯಕ್ಕಿರಿದಂತಾಗುತ್ತಿತ್ತು. ಸ್ನೇಹಿತೆಯೆಂದು ಪ್ರೀತಿಯಿಂದ ತನ್ನ ಮನೆಗೆ ನನ್ನನ್ನು ಕರೆತಂದುದರ ಪರಿಣಾಮವು ಅವಳಿಗೆ ತಿಳಿದಿದ್ದರೇನೆನ್ನುತ್ತಿದ್ದಳೋ! ನೆನೆಸಿ, ಲಿನ್ನಿಯ ಸ್ನೇಹವನ್ನು ಕಳೆದುಕೊಳ್ಳುವ ಸಂಭವವನ್ನು ಯೋಚಿಸಿ ಹೃದಯ ನಡುಗುತ್ತಿತ್ತು. ನನ್ನಪರಾಧವನ್ನು ಒಪ್ಪಿಕೊಳ್ಳುವ ಸಾಹಸ ಹಿಮ್ಮೆಟ್ಟುತ್ತಿತ್ತು.

ರಜ ಕಳೆಯುವದಕ್ಕೆ ಇನ್ನೂ ಎರಡು ದಿನಗಳಿರುವಾಗಲೆ ಶಾಲೆಗೆ ಹಿಂತಿರುಗಿದೆವು. ಬೇರೆ ಯಾವ ಹುಡುಗಿಯರೂ ಬಂದಿರಲಿಲ್ಲ; ನಾವಿಬ್ಬರೇ. ಲಿನ್ನಿಯೊಡನೆ ಕಳೆಯುವ ಪ್ರತಿಯೊಂದು ನಿಮಿಷವೂ ನನಗೆ ಅತ್ಯಮೂಲ್ಯವಾಗಿದ್ದರೂ ನನ್ನ ತಿಳಿಗೇಡಿತನದಿಂದ ಅವಳ ಜೀವನದ ಬೆಳಕನ್ನು ನಂದಿಸಿದ ನನಗೆ ಅವಳ ಮುಖವನ್ನು ನೋಡಲು ಹೆದರಿಕೆಯಾಗುತ್ತಲಿತ್ತು. ರಜ ತೀರಿ ಹುಡುಗಿಯರೆಲ್ಲರೂ ಹಿಂತಿರುಗಿ ಬಂದಾಗ ಲಿನ್ನಿಯ ತುಂಟಾಟಿಕೆಯಿಲ್ಲದ ಹಾಸ್ಯರಹಿತ ಗಂಭೀರ ಮುಖ, ಇಳಿಪಟ್ಟ ಕಣ್ಣು

ಗಳು, ಏಕಾಂತವಾಗಿರಬೇಕೆನ್ನುವ ಇಚ್ಛೆ ಇವನ್ನೆಲ್ಲ ನೋಡಿ ಆಶ್ಚರ್ಯ ದಿಂದ 'ಸೀತಾ, ಲಿನ್ನಿಗೆ ಏನಾಯ್ತು?' ಎಂದು ನನ್ನೊಡನೆ ಕೇಳುತ್ತಿದ್ದರು. ನಾನೇನೆನ್ನಲಿ? ದಿನಗಳು ಕಳೆದಂತೆ ಲಿನ್ನಿ ಮೊದಲಿನ ಆಟ, ತಮಾಷೆ, ಹಾಸ್ಯ ಎಲ್ಲವನ್ನೂ ಬಿಟ್ಟು ಯಾವಾಗಲೂ ಓದುತ್ತಲೇ ಇರುವಳು. ಅವಳೀಗ ಉಪಾಧ್ಯಾಯಿನಿಯರ ಮೆಚ್ಚಿಕೆಯ ಶಿಷ್ಯೆ. ಕ್ಲಾಸಿನಲ್ಲಿ ಮೊದಲನೆಯವಳು. ರಜೆ ಬರುವುದಕ್ಕೆ ಮೊದಲಿನ ಲಿನ್ನಿ ಸಂಪೂರ್ಣವಾಗಿ ವ್ಯತ್ಯಾಸಹೊಂದಿದ್ದಳು. ಮೊದಲು ದೀಪ ಆರಿಸಿ ಮಲಗಿದ ಮೇಲೆ ಲಿನ್ನಿ ಏನಾದರೂ ಮಾತನಾಡುತ್ತಿರುವುದು ವಾಡಿಕೆ. ಆದರೀಗ ರೂಮಿಗೆ ಬಂದೊಡನೆಯೇ ಸುಮ್ಮನೆ ಮಲಗಿ ಬಿಡುತ್ತಿದ್ದಳು. ನಿದ್ರೆ ಬರುತ್ತಿರಲಿಲ್ಲವೆಂದು ನನಗೆ ಗೊತ್ತಿದ್ದರೂ ಮಾತಾಡಿಸುವುದಕ್ಕೆ ಮಾತ್ರ ಸಾಹಸ ಉಂಟಾಗುತ್ತಿರಲಿಲ್ಲ. ನಾವು ಒಂದೇ ರೂಮಿನಲ್ಲಿದ್ದರೂ ಕೊನೆಕೊನೆಗೆ ದಿವಸಕ್ಕೆ ಒಂದು ಮಾತು ಆಡುವುದು ಸಹ ಬಹಳ ಅಪರೂಪವಾಗಿ ಹೋಯ್ತು.

ಒಂದು ದಿನ ಎಂದಿನಂತೆ ದೀಪ ಆರಿಸಿ ಮಲಗಿದ್ದೆವು. ಇಬ್ಬರಿಗೂ ನಿದ್ರೆ ಬಂದಿರಲಿಲ್ಲ. ಲಿನ್ನಿ 'ಸೀತಾ' ಎಂದಳು. ನಾವು ಮಾತಾಡಿಕೊಳ್ಳದೆ ಎಷ್ಟೋ ದಿನಗಳಾಗಿದ್ದವು. ಲಿನ್ನಿ 'ಸೀತಾ' ಎಂದು ಕೂಗಿದುದು ಕೇಳಿ ಹಿಂದಿನ ದಿನಗಳು, ನಮ್ಮಿಬ್ಬರೊಳಗಿನ ಸ್ನೇಹ ಎಲ್ಲಾ ಜ್ಞಾಪಕವಾಗಿ ಅಳು ಬಂದು ಬಿಟ್ಟಿತು. ತಡೆಯಲು ಯತ್ನಿಸಿದರೂ ಆಗಲಿಲ್ಲ. ಬಿಕ್ಕಿ ಬಿಕ್ಕಿ ಅಳತೊಡಗಿದೆ. ಆದರೂ ತಪ್ಪೊಪ್ಪಿ ಕ್ಷಮೆಬೇಡಲು ಧೈರ್ಯವಾಗಲಿಲ್ಲ. ನಾನಳುವ ಶಬ್ದ ಕೇಳಿ ಲಿನ್ನಿ ಎದ್ದುಬಂದು ನನ್ನ ಕೈಗಳನ್ನು ಹಿಡಿದು 'ಸೀತಾ, ನನ್ನ ಸೀತಾ, ಕ್ಷಮಿಸು' ಎಂದಳು.

'ಕ್ಷಮಿಸು'! ನಾನು ಅವಳ ಕಾಲು ಹಿಡಿದು ಹೇಳಬೇಕಾದ ಮಾತದು. ಸರಳ ಮನಸ್ಸಿನ ಲಿನ್ನಿ ನನ್ನೊಡನೆ ಯಾವ ಅಪರಾಧದ ಸಲುವಾಗಿ ಕ್ಷಮೆ ಬೇಡಬೇಕು? ಅವಳು ಪುನಃ ಹೇಳತೊಡಗಿದಳು: 'ನಾನು ನಿನ್ನೊಡನೆ ಮೊದಲಿನಂತೆ ಬಾಯಿ ಬಡಿಯದಿದ್ದರೂ ಮೊದಲಿಗಿಂತಲೂ ಹೆಚ್ಚಿನ ಗೆಳತಿ ನಿನೀಗ ಸೀತಾ, ನಿನಗೆ ನನ್ನ ಗೊತ್ತಿರುವಂತೆ ನನ್ನ ತಾಯಿಗೂ

ಸಹ ಗೊತ್ತಿಲ್ಲ. ಸೀತಾ, ನನ್ನ ಈಗಿನ ವ್ಯವಹಾರದಿಂದ ನಿನಗೆ ಬೇಸರವಾಗಲು ಕಾರಣವಿದೆ. ಆದರೂ ನೀನೀಗ ಮೊದಲಿಗಿಂತಲೂ ನನಗೆ ಹತ್ತಿರವಾಗಿರುವಿ ಸೀತಾ, ಸೀತಾ, ಸೀತಾ......'

ಲಿನ್ನಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಸಮಾಧಾನಪಡಿಸುವುದು ಹೇಗೆಂದು ತಿಳಿಯಲಿಲ್ಲ. ಅವಳನ್ನು ತಬ್ಬಿಕೊಂಡು ಹೆಗಲ ಮೇಲೆ ತಲೆಯಿರಿಸಿ ಮೌನವಾಗಿ ಕಣ್ಣೀರು ಸುರಿಸತೊಡಗಿದೆ.

೫

ಒಂದು ವರ್ಷ ಕಳೆದುಹೋಯಿತು. ನಮ್ಮ ಹೈಸ್ಕೂಲ್ ವಿದ್ಯಾಭ್ಯಾಸವೂ ಪೂರೈಸಿತ್ತು. ನನ್ನ ತಂದೆ ಸ್ತ್ರೀವಿದ್ಯಾಭ್ಯಾಸಕ್ಕೆ ಉತ್ತೇಜನ ಕೊಡುವವರಾದುದರಿಂದ ಕಾಲೇಜು ಶಿಕ್ಷಣಕ್ಕೆ ನನ್ನನ್ನು ಕಳುಹಿಸಬೇಕೆಂದು ನಿಶ್ಚಯಿಸಿದ್ದರು. ಲಿನ್ನಿಯೂ ಓದಲಿಚ್ಛಿಸಿದ್ದರೆ ಅವಳ ತಾಯಿ ತಂದೆಯರು ಅಡ್ಡಿಯಾಗುತ್ತಿರಲಿಲ್ಲ. ಆದರವಳು ಮನೆಯಲ್ಲೇ ಇರಲು ಬಯಸಿದಳು. ಒಂಬತ್ತು ವರ್ಷಗಳಿಂದ ಜೊತೆಯಾಗಿದ್ದ ನಮಗೆ ಒಬ್ಬರನ್ನೊಬ್ಬರು ಅಗಲುವ ಸಮಯದಲ್ಲಿ ಬಹಳ ಕಷ್ಟವಾಯಿತು. ನನಗಂತೂ ಹೊರಡುವಾಗ ಅವಳ ಮುಂದಿನ ಜೀವನವನ್ನು ನೆನಸಿ ತಡೆಯಲಾರದಷ್ಟು ಸಂಕಟವಾಯಿತು. ಆದರೂ ರಾಮು ಮನೆಯಿಂದ ಹೊರಡಲು ಕಾರಣ ಹೇಳಲು ಮಾತ್ರ ಧೈರ್ಯವಾಗಲಿಲ್ಲ. ಮದರಾಸಿಗೆ ಹೋದ ಮೇಲೆ ಬರೆದು ಕ್ಷಮೆ ಬೇಡುವೆನೆಂದು ನಿಶ್ಚಯಿಸಿ ಕೊನೆಗೂ ಹೇಳದೆ ಹೊರಟು ಬಿಟ್ಟೆ. ನಾನು ಮದರಾಸಿಗೆ ಹೋದ ವರ್ಷವೇ ಅಣ್ಣನಿಗೂ ಅಲ್ಲಿಗೇ ವರ್ಗವಾದುದರಿಂದ ಹಾಸ್ಟೆಲ್ ವಾಸ ತಪ್ಪಿ ಹೋಯ್ತು. ಮನೆಯಿಂದಲೇ ಕಾಲೇಜಿಗೆ ಹೋಗುತ್ತಿದ್ದೆ. ನಮ್ಮ ಮನೆ ಮದರಾಸಿನಲ್ಲಾದ ಮೇಲೆ ಲಿನ್ನಿಗೆ ನಮ್ಮಲ್ಲಿಗೆ ಬಂದು ಕೆಲವು ದಿನ ಇದ್ದು ಹೋಗಬೇಕೆಂದು ಅನೇಕ ಕಾಗದಗಳನ್ನು ಬರೆದೆ. ಏನೇನೋ ನೆವನಗಳನ್ನು ಹೇಳಿ ಬರಲಾಗುವುದಿಲ್ಲವೆಂದು ಬರೆದಳು. ಅವಳೇ ಬಂದಾಗ ಎಲ್ಲವನ್ನೂ ಹೇಳುವೆನು ಎಂದು, ಇನ್ನೂ ರಾಮುವು ದೇಶಾಂತರವಾಸಿಯಾದುದರ ಕಾರಣವನ್ನು ಲಿನ್ನಿಗೆ

ತಿಳಿಸಿಯೇ ಇರಲಿಲ್ಲ. ಅವಳು ಬರುವುದಿಲ್ಲ ಎಂದು ಬರೆದ ಮೇಲೆ ನಾನೇ ಅಲ್ಲಿಗೆ ಹೋಗುವೆನೆಂದು ನಿಶ್ಚಯಿಸಿಕೊಂಡೆ. ಆದರೆ ಆ ಸಾರಿಯ ರಜೆಯಲ್ಲಿ ಮೋಹನನಿಗೆ ಕಾಯಿಲೆಯಾದುದರಿಂದ ಹೋಗಲಾಗಲಿಲ್ಲ. ಮೋಹನನ ಕಾಯಿಲೆಯಿಂದ ನನ್ನ ಜೀವನವೇ ಪರಿವರ್ತನೆಯಾಯಿತು. ಅವನ ಕಾಯಿಲೆಯನ್ನು ನೋಡಲು ಬರುತ್ತಿದ್ದ ಡಾಕ್ಟರ್ ಅರುಣಾದೇವಿ ಕನ್ನಡ ನಾಡಿನ ಮಹಿಳೆ. ಮೋಹನನ ಕಾಯಿಲೆ ವಾಸಿಯಾಗುವುದರೊಳಗಾಗಿ ನಮಗಿಬ್ಬರಿಗೂ ಸ್ನೇಹವಾಗಿ ಬಿಟ್ಟಿತ್ತು. ಕೊನೆಗೆ ಅವಳ ಮಾತಿನ ಮೇಲೆ F. A. ಆದ ಮೇಲೆ ಮೆಡಿಕಲ್ ಪರೀಕ್ಷೆಗೆ ಹೋಗಬೇಕೆಂದು ದೃಢಮಾಡಿಕೊಂಡೆ. ಅಮ್ಮನಾಗಲಿ, ಅಣ್ಣನಾಗಲಿ ವಿರೋಧಿಸಲಿಲ್ಲವಾದುದರಿಂದ ಎಂಟು ವರ್ಷಗಳಾಗುವಾಗ ನಾನು M. B. B. S. ಪರೀಕ್ಷೆಯಲ್ಲಿ ಪಾಸಾಗಿ ಡಾಕ್ಟರ್ ಆಗಿ ಬಿಟ್ಟೆ. ಆ ಎಂಟು ವರ್ಷಗಳೂ ಲಿನ್ನಿಗೆ ಕಾಗದಗಳನ್ನು ಬರೆಯುತ್ತಿದ್ದರೂ ಅವಳನ್ನು ನೋಡಲು ಸಾಧ್ಯವಾಗಿರಲಿಲ್ಲ. ಅವಳೂ ನಮ್ಮ ಮನೆಗೆ ಬಂದಿರಲಿಲ್ಲ. ಅವಳು ಬರೆಯುತ್ತಿದ್ದ ಕಾಗದಗಳಿಂದ ಮದುವೆಯಾಗುವುದೇ ಇಲ್ಲ ಎನ್ನುವುದು ಅವಳ ಅಭಿಪ್ರಾಯವೆಂದು ನನಗೆ ಗೊತ್ತಾಗಿತ್ತು. ಹಾಗಾಗುವುದಕ್ಕೆ ನಾನೇ ಕಾರಣಳಾದೆನಲ್ಲಾ—ಎನ್ನುವುದು ಮಾತ್ರ ಮತ್ತೂ ನನ್ನ ಮನಸ್ಸಿನಲ್ಲಿ ಕೊರೆಯುತ್ತಿತ್ತು.

ಪರೀಕ್ಷೆಯ ಗಲಾಟೆ ಎಲ್ಲಾ ಮುಗಿದು ಬಿಡುವಾದ ಮೇಲೆ ಅವಳ ಮನೆಗೆ ಹೊರಟೆ. ಹಿಂದಿನ ಅದೇ ಸ್ಥಳ; ಅದೇ ದಾರಿ; ಅದೇ ಮನೆ. ಆದರೆ ಆ ಸಾರಿ ಹೋಗುವುದಕ್ಕೂ ಈ ಸಾರಿ ಹೋಗುವುದಕ್ಕೂ ಎಷ್ಟು ಅಂತರ! ಆ ಲಿನ್ನಿಗೂ ಈ ಲಿನ್ನಿಗೂ ಅದೆಷ್ಟೊಂದು ವ್ಯತ್ಯಾಸ! ಹಾಗಾಗುವುದಕ್ಕೆ ಕಾರಣ ನಾನು. ಈ ಏಳು ವರ್ಷಗಳಲ್ಲಿ ಲಿನ್ನಿಯ ಜೀವನ ಸಂಪೂರ್ಣವಾಗಿ ವ್ಯತ್ಯಾಸ ಹೊಂದಿತ್ತು. ರಾಮುವನ್ನು ಇನ್ನು ಕಾಣುವುದು ಅಸಾಧ್ಯವೆಂದು ಅವಳಿಗೆ ಗೊತ್ತಿತ್ತು. ಮೊದಲವಳ ಮುಖದಲ್ಲಿ ಅವನನ್ನು ಕಾಣಬಹುದೆಂದು ಮಿಂಚುತ್ತಿದ್ದ ಆಸೆಯ ಸ್ಥಾನವನ್ನೀಗ ಶಾಂತಿ ಆವರಿಸಿತ್ತು. ಆಗ ಸುಮ್ಮನೆ ಕೂತು ಯೋಚಿಸಿ ಚಿಂತಿಸುತ್ತಿದ್ದ

ಲಿನ್ನಿ ಈಗ ಏನಾದರೂ ಕೆಲಸಗಳನ್ನು ಮಾಡುತ್ತ ಅವನನ್ನು ಮರೆಯಲು ಯತ್ನಿಸುತ್ತಿದ್ದಳು. ಕೆಲಸಗಳು ಮುಗಿದು ಬಿಡುವಾದಾಗ ಕೌಸಲ್ಯಾನಂದನನ ಕತೆಗಳನ್ನು ಓದುತ್ತಿದ್ದಳು. ಮೊದಲು ನಾನು ಅವುಗಳನ್ನು ಓದುವಾಗ ಹುಚ್ಚಿ ಎಂದು ನಗುತ್ತಲಿದ್ದ ಲಿನ್ನಿಗೆ ಈಗವುಗಳ ಮೇಲೆ ತುಂಬಾ ಆದರ ಉಂಟಾಗಿತ್ತು. ಕೇಳಿದರೆ 'ಕೌಸಲ್ಯಾನಂದನನ ಕತೆಗಳನ್ನೋದಿದರೆ ಅದೊಂದು ತರದ ಶಾಂತಿ ದೊರೆಯುತ್ತದೆ ಸೀತಾ, ಬೇಸರವಾದಾಗಲೆಲ್ಲಾ ಅವುಗಳನ್ನೋದಿದರೆ ಸಮಾಧಾನವಾಗುತ್ತಿದೆ' ಎನ್ನುತ್ತಿದ್ದಳು. ನಿಜವಾಗಿಯೂ ಅವನ ಪುಸ್ತಕಗಳಲ್ಲಿ ಆ ಶಕ್ತಿ ಇತ್ತು. ಹೊಸದಾಗಿ ಪ್ರಕಟವಾದ ಅವನ 'ವಸಂತಕುಸುಮಗಳ'ಂಬ ಪುಸ್ತಕವಂತೂ ಓದಿದವರು ಅವನನ್ನೆಂದೂ ಮರೆಯದಿರುವಂತೆ ಮಾಡುವ ಪುಸ್ತಕವಾಗಿತ್ತು.

ಮನೆಯಿಂದ ಹೊರಡುವಾಗಲೇ ದೃಢಮಾಡಿಕೊಂಡು ಬಂದಿದ್ದೆ, ಲಿನ್ನಿಗೆ ರಾಮು ಮನೆ ಬಿಡುವುದಕ್ಕೆ ಕಾರಣ ನಾನೆಂದು ಹೇಳಿಯೇ ತೀರಬೇಕೆಂದು. ಹಿಂತಿರುಗಲು ಒಂದು ದಿನ ಮೊದಲಿನ ರಾತ್ರಿ ಬೆಳುದಿಂಗಳಿನಲ್ಲಿ ಅಂಗಳದ ಕೊನೆಯಲ್ಲಿದ್ದ ಮಾವಿನ ಮರದಡಿಯಲ್ಲಿ ಕೂತಿದ್ದಾಗ ಎಲ್ಲಾ ಹೇಳಿ ಅವಳ ಕ್ಷಮೆ ಬೇಡಿದೆ.

'ಸೀತಾ, ಆಗಿ ಹೋದುದಕ್ಕಾಗಿ ಚಿಂತಿಸಿ ಫಲವೇನು ಹೇಳು? ಕ್ಷಮಿಸೆನ್ನುವಿಯೇಕೆ? ನಿನಗೆ ಗೊತ್ತಿದೆ, ನನಗೆ ನಿನ್ನ ಮೇಲೆ ಕೋಪವಿಲ್ಲವೆಂದು. ಇನ್ನೆಂದೂ ಆ ವಿಷಯ ಎತ್ತಬೇಡ.'

ಲಿನ್ನಿಯೊಡನೆ ಹೇಳಿ ಅವಳ ಕ್ಷಮೆ ಬೇಡಿದ ಮೇಲೆ ಹೊತ್ತ ಹೊರೆ ಇಳಿಸಿದಷ್ಟು ಸುಖವಾಯಿತು. ಅವಳ ಮುಖ ನೋಡಿ ಮಾತಾಡಲು ಧೈರ್ಯವಾಯ್ತು. ಮರುದಿನ ಹೊರಡುವಾಗ ಲಿನ್ನಿಯೂ ನನ್ನೊಡನೆ ನಮ್ಮ ಮನೆಗೆ ಬಂದಳು.

## ೭

ಲಿನ್ನಿ ನಮ್ಮ ಮನೆಗೆ ಬಂದು ಎಂಟು ದಿನಗಳಾಗಿದ್ದವು. ಡಾಕ್ಟರ್ ಅರುಣಾ ದೇವಿಗೂ ಅವಳಿಗೂ ಪರಿಚಯವನ್ನು ಮಾಡಿಸುವುದರ ಸಲುವಾಗಿ ಆ ದಿನ ಅವಳನ್ನು ಅವರ ಮನೆಗೆ ಕರೆದುಕೊಂಡು ಹೋದೆ. ನಾವು

ಹೋಗುವಾಗ ಅವಳೊಬ್ಬಳೇ ಕುಳಿತುಕೊಂಡು ಹೊಲಿಯುತ್ತಿದ್ದಳು. ಲಿನ್ನಿಯನ್ನು ನೋಡಿ ಅವಳಿಗೆ ತುಂಬಾ ಸಂತೋಷವಾಯಿತು. ಅರುಣಾ ದೇವಿಗೆ ಸಂಗೀತವೆಂದರೆ ಬಹಳ ಇಷ್ಟ. ಇಬ್ಬರು ಸಂಗೀತ ಪ್ರೇಮಿಗಳು ಸೇರಿದಾಗ ಸಂಗೀತದ ಗಂಧವೇ ಗೊತ್ತಿಲ್ಲದ ನಾನು ಅವರೊಡನೆ ಮಾತಾಡುವುದಾದರೂ ಏನು! ಒಂದು ಮೂಲೆಯಲ್ಲಿ ಕೂತು ಮೇಜಿನ ಮೇಲಿದ್ದ ಕೌಸಲ್ಯಾನಂದನನ ಪುಸ್ತಕವೊಂದನ್ನು ತೆಗೆದು ಓದತೊಡಗಿದೆ. ನಾನು ಆ ಪುಸ್ತಕವನ್ನು ತೆಗೆದುದನ್ನು ನೋಡಿ 'ಸೀತಾ, ಅಣ್ಣನೂ ಕೌಸಲ್ಯಾನಂದನನೂ ಬೆಳಗಿನ ರೈಲಿನಲ್ಲಿ ಬಂದಿದ್ದಾರೆ. ಈಗೆಲ್ಲೋ ತಿರು ಗಾಡಲು ಹೋಗಿರುವರು. ನಿನ್ನ ಮೆಚ್ಚಿಕೆಯ ಕತೆಗಳ ಲೇಖಕನನ್ನು ಏಳು ಗಂಟೆಯವರೆಗಿದ್ದರೆ ನೋಡಬಹುದು' ಎಂದಳು. ನನಗೂ ಲಿನ್ನಿಗೂ ಇಬ್ಬರಿಗೂ ಕೌಸಲ್ಯಾನಂದನನನ್ನು ನೋಡುವ ಆಶೆ ಬಹಳ ಇತ್ತು. ಆದು ದರಿಂದ ಅವನನ್ನು ನೋಡುವ ಸುಯೋಗ ಸಿಕ್ಕಿದುದಕ್ಕೆ ಬಹಳ ಸಂತೋಷ ವಾಯಿತು.

ತಿರುಗಾಡಲು ಹೋದವರು ಎಷ್ಟು ಹೊತ್ತಿಗೆ ಹಿಂತಿರುಗಬಹುದು? ಎಂಬ ತವಕದಿಂದ ಪುಸ್ತಕದ ಹಾಳೆಗಳನ್ನು ತಿರುವಿಹಾಕುತ್ತಿದ್ದೆ. ಅರು ಣಾದೇವಿ ಲಿನ್ನಿಯ ಇದಿರು ಹಾರ್ಮೋನಿಯಮ್ ಇಟ್ಟು ಬಾರಿಸುವಂತೆ ಹೇಳುತ್ತಿದ್ದಳು. ಲಿನ್ನಿ ಹಾರ್ಮೋನಿಯಮ್ ಬಾರಿಸುತ್ತ ಹಾಡಲು ತೊಡಗಿದೊಡನೆ ಪುಸ್ತಕವನ್ನು ಮುಚ್ಚಿ ಬೇರೆ ಎಲ್ಲವನ್ನೂ ಮರೆತು ಕೇಳತೊಡಗಿದೆ. ಅರುಣಾದೇವಿಯಂತೂ ಮಂತ್ರಮುಗ್ಧಳಾದವಳಂತೆ ಲಿನ್ನಿಯನ್ನೇ ಎವೆಯಿಕ್ಕದೆ ನೋಡುತ್ತ ಪ್ರತಿಮೆಯಂತೆ ಕೂತಿದ್ದಳು. ಲಿನ್ನಿಯ ಸ್ವರ ಅಷ್ಟು ಇಂಪು; ಹಾಡುವ ಹಾಡು ಅಷ್ಟೊಂದು ಭಾವ ಪೂರ್ಣವಾದುದು—ಲೈಲಾ ಮತ್ತು ಮಜನುವಿನ ಪ್ರೇಮಗೀತೆ. ಲಿನ್ನಿಯ ಜೀವನವು ಚೆನ್ನಾಗಿ ತಿಳಿದ ನನಗೆ ಅವಳು ಆ ಮಧುರ ಸ್ವರದಲ್ಲಿ ಆ ಮನೋ ಹರ ಗೀತೆಯನ್ನು ಹಾಡುವಾಗ ಕಣ್ಣೀರು ತಡೆಯಿಲ್ಲದೆ ಹರಿಯತೊಡ ಗಿತು. ಅರುಣಾದೇವಿಯೂ ಹರಿಯುವ ಕಣ್ಣೀರಿನ ಪರಿವೆಯಿಲ್ಲದೆ ಲಿನ್ನಿಯ ಮುಖವನ್ನೇ ನೋಡುತ್ತಾ ಬೆಪ್ಪಾಗಿ ಕೂತು ಬಿಟ್ಟಿದ್ದಳು.

ಲಿನ್ನಿಯ ಹಾಡು ಮುಗಿಯಿತು. ಭಾವ ಸಾಮ್ರಾಜ್ಯದಲ್ಲಿದ್ದ ನಾವು ಎಚ್ಚರಗೊಂಡೆವು. ಅರುಣಾದೇವಿಯು ಲಿನ್ನಿಯ ಕೈ ಹಿಡಿದು 'ಸೀತೆಯ ಬಾಯಿಂದ ನೀವು ಚೆನ್ನಾಗಿ ಹಾಡುವಿರೆಂದು ಕೇಳಿದ್ದರೂ ಇಷ್ಟೊಂದು ಚೆನ್ನಾಗಿ ಹಾಡುವಿರೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ.' ಎಂದಳು. ಲಿನ್ನಿ 'ನಾನು ಹಾರ್ಮೋನಿಯಮ್ ಮುಟ್ಟದೆ ಬಹಳ ದಿನಗಳಾದವು. ಬಾರಿಸುವ ಪಾಠ ತಪ್ಪಿಹೋಗಿದೆ' ಎಂದು ಹೇಳುತ್ತಾ ಎದ್ದು ನಿಂತಳು. ಲಿನ್ನಿಯ ಸರಳತೆ ಅರುಣಾದೇವಿಯನ್ನು ಸಂಪೂರ್ಣವಾಗಿ ಒಲಿಸಿಕೊಂಡಿತು.

ಲಿನ್ನಿಯ ಹಾಡುವಿಕೆಯಿಂದಾಗಿ ಹೊತ್ತು ಹೋದುದೇ ತಿಳಿದಿರಲಿಲ್ಲ. ಗಡಿಯಾರವನ್ನು ನೋಡುವಾಗ ೭॥ ಗಂಟೆಯಾಗಿತ್ತು. ಕೌಸಲ್ಯಾನಂದನನು ಬಂದಿರಲಿಲ್ಲ. ಮರುದಿನ ಬರುವೆವೆಂದು ಹೇಳಿ ಹೊರಟೆವು. ಹೊರಜಗುಲಿಗೆ ಬರುವಾಗ ಅವರಿಬ್ಬರೂ ಕೂತಿದ್ದುದು ಕಾಣಿಸಿತು. ಕತ್ತಲಾಗಿದ್ದುದರಿಂದ ಮುಖ ಕಾಣಿಸಲಿಲ್ಲ. ಅರುಣ 'ಅಣ್ಣಾ, ಬಂದೆಷ್ಟು ಹೊತ್ತಾಯಿತ್ತು?' ಎಂದಳು. ಆತ 'ಒಂದು ಗಂಟೆಯ ಹಿಂದೆಯೇ ಬಂದೆವು. ಒಳಗಿನಿಂದ ಹಾಡು ಕೇಳುತ್ತಿದ್ದುದರಿಂದ, ಒಳಗೆ ಹೋದರೆ ಅದು ನಿಂತು ಹೋಗಿ ಕೇಳುವ ಸುಯೋಗವು ತಪ್ಪಬಹುದೆಂದು ಇಲ್ಲೇ ಕೂತು ಕೇಳುತ್ತಿದ್ದೆವು.' ಎಂದ. ಅವನೊಡನೆ 'ಹಾಡಿದವರು ಇವರು' ಎಂದು ಅರುಣಾದೇವಿ ಲಿನ್ನಿಯ ಕಡೆ ತಿರುಗಿ 'ಇವನು ನನ್ನ ಅಣ್ಣ, ಇವರು ಕೌಸಲ್ಯಾನಂದನ' ಎಂದಳು. ಅಷ್ಟರಲ್ಲಿ ಒಳಗಿನಿಂದ ಆಳು ದೀಪ ತಂದಿರಿಸಿದ. ಬೆಳಕಿನಲ್ಲಿ ನೋಡಿದೆವು....ಆಶ್ಚರ್ಯದ ಪರಮಾವಧಿ! ಕನ್ನಡಿಗರ ಒಲವಿನ ಕೌಸಲ್ಯಾನಂದನ–ಲಿನ್ನಿಯ ಮನವನ್ನು ಕದ್ದ ರಾಮು! ತುಂಟ ರಾಮು!!

ಆಶ್ಚರ್ಯದಿಂದ ಆನಂದದಿಂದ ಲಿನ್ನಿ 'ರಾಮು' ಎಂದಳು. ನಾವೆಲ್ಲರಿರುವೆನೆಂಬುದನ್ನೇ ಮರೆತು ರಾಮು ಅವಳ ಕೈಗಳೆರಡನ್ನೂ ಹಿಡಿದು 'ನನ್ನ ವಸಂತ!' ಎಂದ.

# ನಾಲ್ಕು ಘಟನೆಗಳು

## ೧

ಸೀತಾ,

'ಬೇಗನೆ ಕಾಗದ ಬರಿ; ಕಾಯುತ್ತಿರುತ್ತೇನೆ, ಮರೆಯಬೇಡ' ಎಂದು ಬರೆದಿರುವೆ. ಕಾಗದ ಬರೆಯದಿದ್ದುದಕ್ಕೆ ಕ್ಷಮಿಸು. ನೀನು ಯೋಚಿಸಿರುವಂತೆ ಬರೆಯದಿರುವುದಕ್ಕೆ ಕಾರಣ ನಿನ್ನನ್ನು ಮರೆತದ್ದೂ ಅಲ್ಲ-ಹೊಸ ಸ್ನೇಹಿತರೂ ಅಲ್ಲ. ನಿನಗಿಂತಲೂ ಹೆಚ್ಚಿನ ಸ್ನೇಹಿತರು ಹೊಸಬ ರಾಗಲು ಸಾಧ್ಯವೇ? ಕಾರಣ ಏನೆನ್ನಲಿ? ಹೇಳುವುದಕ್ಕೆ ಯತ್ನಿಸುವು ದಿಲ್ಲ. ನೀನು ನನ್ನನ್ನು ನಂಬಬೇಕಾದರೆ ಕಾರಣಗಳ ಅಗತ್ಯವಿಲ್ಲ. ನೀನು ನನ್ನನ್ನು ಬಲ್ಲೆ; ಮತ್ತೇಕೆ ಹೆಚ್ಚಿನ ವಿಚಾರ?

ನನ್ನ ಸೀತಾ, ನಿನಗೆ ಗಳಿಗೆಗೊಂದು ಕಾಗದ ಬರೆದರೂ ನನಗೆ ತೃಪ್ತಿಯಿಲ್ಲ. ನಿನಗೆ ಬರೆಯುವ ನನ್ನ ಕಾಗದಗಳಿಗಾಗಿ ಸರ್ಕಾರದವ ರೊಂದು ಅಂಚೆಯ ಮನೆಯನ್ನು ನನ್ನ ಮನೆಯ ಹತ್ತಿರ ಸ್ಥಾಪಿಸಿದರೂ ಅವರಿಗೆ ನಷ್ಟವಾಗಲಾರದು.

ನೀನು ಪರೀಕ್ಷೆಯಲ್ಲಿ ತೇರ್ಗಡೆಹೊಂದಿದುದನ್ನು ತಿಳಿದು ಸಂತೋಷ ವಾಯಿತು. ಹಿಂದಿನ ಕಾಗದದಲ್ಲಿ ಉತ್ತೀರ್ಣಗಳಾಗಬೇಡ ಎಂದು ಬರೆದಿದ್ದೆ. ಹಾಗೆ ಬರೆದುದರ ಕಾರಣ ನನ್ನ ಸ್ವಾರ್ಥವೆಂದು ನೀನು ಊಹಿಸಿರಬಹುದು. ಹೇಗೂ ನೀನು ಪಾಸಾದದ್ದು ನನಗೆ ತುಂಬಾ

ಕಂ
ಬ
ನಿ

ಆನಂದದ–ಹೆಮ್ಮೆಯ ವಿಷಯ. ನಾನೂ ಹಿಂದೀ ಭಾಷೆಯನ್ನು ಅಭ್ಯಾಸ ಮಾಡಲು ತೊಡಗಿರುವೆನು. ಅದಕ್ಕೆ ಕಾರಣಗಳು ನೀನೆಂದು ಹೇಳಬೇಕೆ? ಜಾನ್ ರಸ್ಕಿನ್‌ರವರ 'ಆಫ್‌ಕ್ವೀನ್ಸ್ ಗಾರ್ಡನ್ಸ್' ನೆನಪಾಗುವುದು. ಹೆಂಗಸರ ಉತ್ತೇಜನವಿದ್ದರೆ ಗಂಡಸರು ಯಾವ ಕೆಲಸವನ್ನಾದರೂ ಮಾಡಬಲ್ಲರಂತೆ. ಹಿಂದೂ ದೇಶದ ಗಂಡಸರಿಗೆ 'ನನ್ನ ಸೀತೆ'ಯಂತವರು ಇರುತ್ತಿದ್ದರೆ ಇಷ್ಟರಲ್ಲಿ ಇಡೀ ಭಾರತವು ಭಾಷೆಯಲ್ಲಿ ಒಂದಾಗಿಹೋಗುತ್ತಿತ್ತು.

ಸೀತಾ, ನನಗೆ ಮೊದಲೇ ನೀನು ಅನೇಕ ಹೆಸರುಗಳನಿಟ್ಟಿರುವೆ. ಈ ಸಾರಿಯಂತೂ 'ಹರಟೆಯ ಮಲ್ಲಿ' ಎಂಬ ಬಿರುದನ್ನು ಖಂಡಿತವಾಗಿಯೂ ಕೊಡದಿರಲಾರೆ ಎಂದು ನನಗೆ ಗೊತ್ತಿದೆ. ಬಿರುದುಗಳಿಗಾಗಿ ಹೊಡೆದಾಡುವ ಈ ಕಾಲದಲ್ಲಿ ನನ್ನ ಭಾಗ್ಯಕ್ಕೆ ಸರಿಯಿಲ್ಲ–ಅಲ್ಲವೆ ? ಕಷ್ಟಪಟ್ಟರೂ ಸಿಕ್ಕದ ಬಿರುದುಗಳನ್ನು ನೀನು ನನಗೆ ಕೊಡುತ್ತಿರುವಾಗ ನಾನು ಅದೃಷ್ಟವಂತನೆಂದರೆ ತಪ್ಪೇನು ?

ಆದರೆ ಬಿರುದನ್ನು ನೀನೇ ಬಂದು ದಯಪಾಲಿಸಬೇಕು. ಕಾಗದದ ಮೂಲಕ ಕಳುಹಿಸಬೇಡ–ಆಗದೇ ?

ನಿನ್ನ,

ರಾಮು

೨

ಸೀತಾ,

ಏಕೆ ಕೋಪ ? ಬರೆಯುವುದೇ ಇಲ್ಲವೆಂದು ನಿಶ್ಚಯಿಸಿರುವಿಯೇನು ? ಆದರೂ ನನಗೆ ಗೊತ್ತಿದೆ ಸೀತಾ, ನಿನ್ನ ಮನಸ್ಸು ಎಷ್ಟು ಮೃದುವೆಂದು; ಈ ಕಾಗದವನ್ನು ನೋಡಿದಕೂಡಲೆ ಕೋಪವೆಲ್ಲವನ್ನೂ ಮರೆತು ಬರೆಯತೊಡಗುವೆ ಎಂದೂ ನನಗೆ ಗೊತ್ತಿದೆ. ಹಿಂದೂ ರಮಣಿಯರ ಮನಸ್ಸೇ ಅಷ್ಟುಕೋಮಲ–ಅದರಲ್ಲೂ ನನ್ನ ಸೀತೆಯ ಮನಸ್ಸು!

ಮೊನ್ನೆದಿನ ಕ್ಲಬ್ಬಿನಿಂದ ಬರುವಾಗ ಒಂದು ವಿಶೇಷವನ್ನು

ನೋಡಿದೆ; ನೋಡಿ ಸ್ತ್ರೀಯರ ಸಹನಶೀಲತೆ, ಪ್ರೇಮ, ಭಕ್ತಿ, ವಿಶ್ವಾಸ
ಗಳ ಆಳವನ್ನು ಕಂಡುಹಿಡಿಯುವುದು ಸುಲಭವಲ್ಲವೆಂದು ತಿಳಿದು
ಕೊಂಡೆ.

ನಾನು ಪ್ರತಿದಿನವೂ ಆಫೀಸಿಗೆ ಹೋಗುವರಸ್ತೆ ನಿನಗೆ ಗೊತ್ತಿದೆ.
ರಸ್ತೆಯ ಬದಿಯಲ್ಲಿರುವ ನಮ್ಮ ಆಫೀಸಿನ ಜವಾನ ತಿಮ್ಮನ ಮನೆಯನ್ನು
ನೀನು ನೋಡಿರುವೆ. ತಿಮ್ಮ, ಅವನ ಹೆಂಡತಿ, ಒಂದು ವರ್ಷದ ಮಗು
ಮೂರೇ ಜನರು ಆ ಮನೆಯಲ್ಲಿ. ತಿಮ್ಮನ ಮಗು ಯಾವಾಗಲೂ
ಬೀದಿಯ ಬಾಗಿಲಲ್ಲಿ ಆಡುತ್ತಿರುತ್ತದೆ. ಮೈಮೇಲೆ ಮಸಿ ಹಚ್ಚಿದರೆ
ಮಸಿಯೇ ಬಿಳಿದಾಗಿ ತೋರಬಹುದಾದಷ್ಟು ಕಪ್ಪು ಆ ಮಗು. ಆದರೂ
ಮಗು ಬಲು ಮುದ್ದಾಗಿದೆ. ಅದರ ಮುಖದಲ್ಲಿ ಸದಾ ನಗು. ಮೈ
ಕಪ್ಪಾದರೇನು ಸೀತಾ? ನಿಷ್ಕಲ್ಮಷವಾದ ಮುಖದ ಸೊಬಗೇ ಸಾಲದೆ?

ಮೊನ್ನೆದಿನ ಅದೇ ರಸ್ತೆಯಲ್ಲಿ ನಾನು ಕ್ಲಬ್ಬಿನಿಂದ ಹಿಂತಿರುಗಿ
ಬರುತ್ತಿದ್ದೆ. ಎಂಟುಗಂಟೆ ಹೊಡೆದುಹೋಗಿತ್ತು. ದಾರಿಕರೆಯ ಮನೆಯ
ಬಾಗಿಲುಗಳೆಲ್ಲವೂ ಮುಚ್ಚಲ್ಪಟ್ಟಿದ್ದುವು. ತಿಮ್ಮನ ಮನೆಯ ತೆರೆದ ಬಾಗಿಲಿ
ನಿಂದ ಮಾತ್ರ ದೀಪದ ಬೆಳಕು ರಸ್ತೆಯಲ್ಲಿ ಇಣಿಕಿ ನೋಡುತ್ತಿತ್ತು.
ಒಳಗಿನಿಂದ ಜೋರಾಗಿ ಕೂಗು ಕೇಳಿಸುತ್ತಿತ್ತು. ಹತ್ತಿರ ತಲುಪಿದಾಗ
ತಿಮ್ಮ ತನ್ನ ಹೆಂಡತಿಯನ್ನು ಹೊಡೆಯುತ್ತಿರುವನೆಂದು ತಿಳಿಯಿತು.
ನಾನು ಆ ಮನೆಯನ್ನು ದಾಟಿ ಒಂದೆರಡು ಹೆಜ್ಜೆ ಮುಂದೆ ಹೋಗಿದ್ದೆ.
ಅಷ್ಟರಲ್ಲೇ ತಿಮ್ಮ ಅವಳನ್ನು ಎಳೆದುಕೊಂಡು ರಸ್ತೆಗೆ ಬಂದು ಬೆತ್ತದಿಂದ
ಇನ್ನೂ ಜೋರಾಗಿ ಹೊಡೆಯತೊಡಗಿದ. ಸುತ್ತುಮುತ್ತಲಿನ ಮನೆ
ಯವರು ಬಾಗಿಲನ್ನು ತೆರೆದುಕೊಂಡು ಹೊರಗೆ ಬಂದು ನೋಡತೊಡ
ಗಿದರು. ನೋಡಿ, 'ಇದೂ ಒಂದು ಸಂಸಾರ' ಎಂದೆನಿಸಿತು ನನಗೆ.

ಮರುದಿನ ಬೆಳಗ್ಗೆ ಆಫೀಸಿಗೆ ಹೋಗುತ್ತಿದ್ದೆ, ಅದೇ ದಾರಿಯಿಂದ.
ತಿಮ್ಮ ತನ್ನ ಮನೆ ಇದಿರಿನ ಮುರಿದ ಬೇಲಿಯನ್ನು ಸರಿಮಾಡಿ ಕಟ್ಟು
ತ್ತಿದ್ದ. ಹತ್ತಿರವೆ ಅವನ ಹೆಂಡತಿ ನಿಂತು ನಗುತ್ತಾ ಅವನೊಡನೆ ಮಾತ
ನಾಡುತ್ತಿದ್ದಳು. ಎಂದಿನಂತೆ ಅವರ ಮಗು ಅಂಗಳದಲ್ಲಿ ಆಟವಾಡುತ್ತಿತ್ತು.

ನಾನು ನೋಡುತ್ತಿದ್ದಂತೆ ಆಕೆ ಮಗುವನ್ನೆತ್ತಿ ಅವನ ಭುಜದ ಮೇಲೆ ಕೂರಿಸಿದಳು. ಮಗು ಕೇಕೆಹಾಕಿ ನಗತೊಡಗಿತು ಅವಳೂ ನಕ್ಕಳು. ತಿಮ್ಮ ನಗುತ್ತ ಮಗುವನ್ನು ಮುದ್ದಿಟ್ಟುಕೊಂಡನು. ನೋಡಿ ಆಶ್ಚರ್ಯ ವಾಯಿತೆಂದರೆ,—ಆಶ್ಚರ್ಯವೇನು ಸೀತಾ! ಪಾಶ್ಚಾತ್ಯ ದೇಶಗಳಲ್ಲಾಗಿದ್ದರೆ ವಿವಾಹವಿಚ್ಛೇದನದ ಕೋರ್ಟಿಗೆ ಹೊಸದೊಂದು ಫಿರ್ಯಾದು ದಾಖಲಾಗುತ್ತಿತ್ತು.

ನಿನ್ನ,

ರಾಮು

೩

ಸೀತಾ, ನಾನು L. A. ಯಲ್ಲಿ ಹೆಣ್ಣುಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ಮಸೂದೆಯನ್ನು ತರಲಿರುವರು ಎಂಬುದಕ್ಕೆ ನೀನು ನಕ್ಕು 'ನಿನಗೆ ತಂಗಿಯರಿಲ್ಲ ರಾಮು, ಅದೇ ಅಷ್ಟೊಂದು ಧೈರ್ಯ' ಎಂದು ಚೇಷ್ಟೆ ಮಾಡಿದುದು ನಿನಗೆ ನೆನಪಿದೆಯೆ ಸೀತಾ, ಆದರೂ ನಿನ್ನ ಮನಸ್ಸಿಗೆ ಗೊತ್ತಿರಬಹುದು ನನಗೆ ತಂಗಿಯರಿದ್ದರೂ ರಮಣಿಯರ ಆರ್ಥಿಕಸ್ವಾತಂತ್ರ್ಯತೆಗೆ ನಾನು ಶತ್ರುವಾಗಲಾರೆನೆಂದು. ಅಲ್ಲವೇ? ನಿಜವನ್ನು ಹೇಳು—

ನಿನ್ನೆದಿನ ತೋಟಕ್ಕೆ ಹೋಗಿದ್ದೆ. ಬರುವಾಗ ಕತ್ತಲಾಗಿತ್ತು. ಈಗಿನ ಚಳಿಯಂತೂ ನಿನಗೆ ಪರಿಚಯವಿಲ್ಲದೆ ಇಲ್ಲ. ಕೋಟನ್ನು ಹಾಕಿಕೊಂಡು ಹೋಗುವುದನ್ನು ಮರೆತಿದ್ದೆ. ಚಳಿಯಿಂದ ನಡುಕಹಿಡಿದು 'ಮನೆಗೊಂದುಸಾರಿ ತಲುಪಿದರೆ ಸಾಕಪ್ಪಾ' ಎನಿಸಿತ್ತು. ಬೇಗಬೇಗನೆ ನಡೆಯುತ್ತಿದ್ದೆ. ತೋಟಕ್ಕೆ ಹೋಗುವ ದಾರಿಯಲ್ಲಿ ದೊಡ್ಡದೊಂದು ನಂದಿಯ ಮರವಿದೆಯಲ್ಲ, ಅಲ್ಲಿಯವರೆಗೆ ಬಂದಿದ್ದೆ. ಮರದ ಬುಡದಲ್ಲಿ ಯಾರೋ ಕುಳಿತಿದ್ದಂತೆ ಕಂಡಿತು. ಬೀರ ಹೇಳಿರಲಿಲ್ಲವೇ? ನಂದಿಯ ಮರದಡಿಯಲ್ಲಿ ಭೂತವಿದೆಯೆಂದು. ಟಾರ್ಚ ಹಾಕಿ ನೋಡಿದೆ—ಭೂತದ ವಿಷಯ ನಂಬಿಕೆಯಿಂದಲ್ಲ. ಕೂತವರು ಯಾರೆಂದು ನೋಡುವ ಸಲುವಾಗಿ. ಅವಳೊಬ್ಬ ಹೆಂಗಸು. ಮಡಿಲಲ್ಲೊಂದು ಮಗು ನಿದ್ರೆ ಮಾಡುತ್ತಿತ್ತು.

ತಾಯಿ ಚಳಿಯಿಂದ ನಡುಗುತ್ತಿದ್ದರೂ ಮಗು ಅವಳ ಸೆರಗಿನ ಆಶ್ರಯ ದಲ್ಲಿ ಸ್ವಸ್ಥವಾಗಿ ಮಲಗಿತ್ತು. ಅತ್ತು ಕೆಂಪಾದ ಕಣ್ಣುಗಳು, ಕೆದರಿದ ಕೂದಲು, ಹರಕು ಸೀರೆ. ಕತ್ತಲಲ್ಲಿ ಒಂದು ಮಗುವಿನೊಡನೆ ಒಬ್ಬಳೇ ಕುಳಿತಿರುವುದನ್ನು ನೋಡಿ ಕೇಳಿದೆ—ಕತ್ತಲಲ್ಲಿ ಅಲ್ಲೇಕೆ ಕುಳಿತಿರುವು ದೆಂದು. ಅಯ್ಯೋ ಸೀತಾ, ನೀನಾಗ ನನ್ನೊಡನಿದ್ದಿದ್ದರೆ ಸ್ತ್ರೀಯರ ಆರ್ಥಿಕ ಸ್ವತಂತ್ರತೆಯ ವಿಷಯದಲ್ಲಿ ನಾನು ಮಾತೆತ್ತುವಾಗ ನಗು ತ್ತಿರಲಿಲ್ಲ.

ಆ ಅನಾಥ ವಿಧವೆಯನ್ನು ಜಗಳವಾಡಿ ಮಗುವಿನೊಡನೆ ಮಧ್ಯ ರಾತ್ರಿಯಲ್ಲಿ ಅವಳತ್ತೆ ಮನೆಯಿಂದ ಹೊರಡಿಸಿದಳಂತೆ.

ಇದಕ್ಕೇನನ್ನುವೆ ಸೀತಾ? ಭಾರತ ರಮಣಿಯರಿಗೆ ಆರ್ಥಿಕ ಸ್ವತಂತ್ರತೆ ಇಲ್ಲದೆ ಎಷ್ಟೊಂದು ದುಷ್ಪರಿಣಾಮಗಳಾಗುತ್ತಿರುವವೆಂದು ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿಯೂ ನನಗೆ ಸಂತೋಷವಾಗುವುದು. ಇನ್ನೇನು ಬರೆಯಲಿ ?

ನಿನ್ನ,

ರಾಮು

೪

ನನ್ನ ಸೀತಾ

ನಿನ್ನ ಕಾಗದ ಕಳೆದ ವಾರವೇ ಬಂದಿತ್ತು. ಆದರೆ ನಾನು ಮಾತ್ರ ಊರಲ್ಲಿರಲಿಲ್ಲ. ಈಗ ತಾನೇ ಬಂದೆ. ಮೇಜಿನ ಮೇಲೆ ಕಾಗದಗಳ ಕಟ್ಟೊಂದು ಇತ್ತು. ನಿನ್ನ ಕಾಗದವು ಬಂದಿರಬಹುದೆಂದು ನನಗೆ ಗೊತ್ತಿತ್ತು. ಬೇಗ ಬೇಗನೆ ಅದನ್ನು ತೆಗೆದು ಓದಿದೆ, ಓದಿದೆ, ಎಷ್ಟು ಓದಿ ದರೂ ತೃಪ್ತಿಯಿಲ್ಲ ಸೀತಾ! ಓದುತ್ತಾ ಕುಳಿತರೆ ನಿನಗೆ ಬರೆಯಲು ನಿಧಾನವಾಗುವುದು. ನಾನು ಸಾವಕಾಶ ಮಾಡಿದರೆ ನೀನೂ ಹಾಗೆಯೇ ಮಾಡಿಬಿಡುವೆ. ಆದುದರಿಂದ ನಿನಗೆ ಮೊದಲು ಕಾಗದ ಬರೆದು ನಿನ್ನ ಇನ್ನೊಂದು ಕಾಗದ ಬರುವವರೆಗೂ ಇದನ್ನು ಓದುತ್ತಿರುತ್ತೇನೆ. ಬೇಗ

ಬರೆ. ಈ ಸಾರಿ ವಿಲಂಬವಾಯಿತೆಂದು ಮುಯ್ಯಿ ತೀರಿಸಿಕೊಳ್ಳುವ ಯತ್ನ ಮಾಡಬೇಡ. ವಿಲಂಬಕ್ಕೆ ಕಾರಣವು ತಿಳಿದರೆ ಹಾಗೆ ಮಾಡಲಾರೆ.

ನಿನ್ನ ಕಾಗದವು ಬರುವಾಗ ನಾನು ಊರಲ್ಲಿರಲಿಲ್ಲ ಎಂದು ಬರೆದಿದ್ದೇನೆ. ಎಲ್ಲಿಗೆ ಹೋಗಿದ್ದೆ ಗೊತ್ತೇ? ಗೋವಿಂದ ರಾಯರ ಮನೆಗೆ; ಅವರ ಮೊಮ್ಮಗನ ನಾಮಕರಣಕ್ಕೆ. ಒಂದು ದಿನ ಮುಂದಾಗಿಯೇ ಹೋಗಿದ್ದೆ; ಅವರ ಒತ್ತಾಯ ತಡೆಯಲಾರದೆ. ಅಪರೂಪದ ಮಗು—ಮನೆಯವರ ಆದರದ ಬೊಂಬೆ. ಬಹಳ ಸಂಭ್ರಮದಿಂದ ನಾಮಕರಣದ ಸಿದ್ಧತೆಗೆ ಆರಂಭವಾಯಿತ್ತು.

ಸೊಸೆ ಬಾಣಂತಿತನಕ್ಕೆ ಹೋದವಳು ಹಿಂದಿರುಗಿ ಬಂದಿರಲಿಲ್ಲ. ಮಗ ಕರೆತರಲು ಹೋಗಿದ್ದ. ನಾನು ಹೋಗಿ ಸ್ವಲ್ಪ ಹೊತ್ತಾಗಿತ್ತು. ಬಂದಿದ್ದವರೊಡನೆ ಹರಟೆಹೊಡೆಯುತ್ತಾ ಜಗುಲಿಯ ಮೇಲೆ ಕುಳಿತಿದ್ದೆ. ಅಷ್ಟರಲ್ಲಿ ಅವರ ಮಗ ಹೆಂಡತಿಯನ್ನೂ ಮಗುವನ್ನೂ ಕರೆದುಕೊಂಡು ಬಂದ. ಆಗ ಬೆಳಗಿನ ಹತ್ತುಗಂಟೆಯಾಗಿತ್ತು. ಗೋವಿಂದರಾಯರ ಹೆಂಡತಿ ಅವರನ್ನು ಇದಿರುಗೊಂಡು ಮಗುವನ್ನು ಎತ್ತಿ ಮುದ್ದಿಟ್ಟು ದೃಷ್ಟಿಯಾಗದಂತೆ ಮೊಮ್ಮಗನಿಗೆ ಮಸಿಬೊಟ್ಟಿಟ್ಟರು. ಸೊಸೆಗೆ ಕುಂಕುಮವಿಟ್ಟು ಕೈಹಿಡಿದು ಒಳಗೆ ಕರೆದುಕೊಂಡು ಹೋದರು.

ಎಲ್ಲರಿಗೂ ಸಂತೋಷ—ಸಂಭ್ರಮ—ಹಿಗ್ಗೇಹಿಗ್ಗು. ಅಪರೂಪದ ಮಗು. ಸಾಲದುದಕ್ಕೆ ಮುದ್ದಿನ ಚಂಡಿಸಂತಹ ಗಂಡು. (ನಗಬೇಡ) ಕೇಳಬೇಕೆ—ಆನಂದದ ಸುರಿಮಳೆ!

ಸೊಸೆ ಒಳಗೆ ಹೋದಳು. ಹಿತ್ತಲಜಗುಲಿಯಲ್ಲಿ ಹಾಸಿದ ಚಾಪೆಯ ಮೇಲೆ ಅತ್ತೆ, ಸೊಸೆಯನ್ನು ಕೂಡಿಸಿ ಮೊಮ್ಮಗನಿಗೆ ಕುಡಿಸಲು ಹಾಲು ತಂದಿಟ್ಟರು. ಆಕೆ ಹಾಲು ಕುಡಿಸತೊಡಗಿದಳು. ಇನ್ನೇನು—ಎರಡೇ ಎರಡು ಚಮಚೆ ಹಾಲು ಉಳಿದಿತ್ತು. ಅಷ್ಟರಲ್ಲಿ 'ಢಂ' ಎಂದು ಶಬ್ದವಾಯಿತು. ಹಾಲು ಕುಡಿಸುತ್ತಾ ಕೂತಿದ್ದ ತಾಯಿ ಕೆಳಗುರುಳಿದಳು. ಮಗು ನೆಲಕ್ಕೆ ಬಿದ್ದು ಚೀರತೊಡಗಿತು. ಎಲ್ಲರೂ ಓಡಿಹೋಗಿ ನೋಡಿದೆವು. ಅಜ್ಜಿ ಮಗುವನ್ನೆತ್ತಿಕೊಂಡರು. ಮಗ ಹೆಂಡತಿಯನ್ನು ಎತ್ತಿದ.

ಧಾರೆಧಾರೆಯಾಗಿ ಅವಳ ಎದೆಯಿಂದ ರಕ್ತ ಸೋರುತ್ತಿತ್ತು. ನೆಲದಿಂದ ಎತ್ತುವ ಮೊದಲೇ ಪ್ರಾಣವು ಹಾರಿಹೋಗಿತ್ತು.

ಕ್ಷಣಹೊತ್ತಿನ ಮೊದಲು ತಾಯ್ತನದ ಹೆಮ್ಮೆಯಿಂದ, ಯೌವನದ ಸೊಬಗಿನಿಂದ ಬೆಳಗುತ್ತಿದ್ದ ಅವಳು ಈ ಜನ್ಮದ ಸುಖದುಃಖಗಳನ್ನು ಬಿಟ್ಟು ಹೊರಟು ಹೋಗಿದ್ದಳು. ಎಲ್ಲರೂ ಏನೂ ತೋರದೆ ಬೊಂಬೆಗಳಂತೆ ನಿಂತಿದ್ದೆವು. ಮಗು ಮಾತ್ರ ಚೀರಿಚೀರಿ ಅಳುತ್ತಿತ್ತು. ಮಗುವಿನ ತಂದೆಗೆ ಪ್ರಜ್ಞೆಯೇ ಇರಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ತಿಳಿಯಿತು; ಅವಳ ಅಕಾಲಮೃತ್ಯುವಿಗೆ ಹಿತ್ತಲ ಕಿತ್ತಳೆಯ ತೋಟದಲ್ಲಿ ಕಾಗೆಗಳನ್ನು ಅಟ್ಟುವುದಕ್ಕಾಗಿ ಹೊಡೆದ ಗುಂಡು ಅಕಸ್ಮಾತ್ತಾಗಿ ಅವಳಿಗೆ ತಗಲಿದುದೇ ಕಾರಣವೆಂದು.

ನೋಡಿದೆಯಾ ಸೀತಾ, ಮೊಮ್ಮಗನ ಜನನದಿಂದ ಶಾಂತಿ, ಸುಖ, ಸಂತೋಷದಿಂದ ಮೆರೆಯುತ್ತಿದ್ದ ಆ ಸಂಸಾರಕ್ಕೆ ಬಂದ ದುಃಖ! ಅದು ಬಂದೊದಗಿದ ರೀತಿ!!

ಮನುಷ್ಯರು ಮರುಕ್ಷಣದ ಗತಿಯನ್ನರಿಯದೆ ಹೊಡೆದಾಡುವ ಜೀವನದ ರಹಸ್ಯ ಇದೇ ಏನು? ತಿಳಿದವರಾರು!

ಯಾವಾಗಲೂ ನಿನ್ನ,

ರಾಮು

ಮೇ ೧೯೩೫

# ಪ್ರಾಯಶ್ಚಿತ್ತ

೧

ದಸರಾ ರಜೆಯಲ್ಲಿ ಮೂರ್ತಿ ಬೆಂಗಳೂರಿನಿಂದ ಹಳ್ಳಿಗೆ ಬಂದಿದ್ದ. ಐಶ್ವರ್ಯವಂತರಾದ ತಂದೆತಾಯಿಯರಿಗೆ ಅವನೊಬ್ಬನೇ ಮಗ; ತಾಯಿಯ ಪ್ರೇಮದ ಬೊಂಬೆ. ಇಪ್ಪತ್ತುಮೂರು ವರ್ಷ ವಯಸ್ಸಿನವನಾದರೂ ತಾಯಿ ಅವನನ್ನು ಎರಡು ವರ್ಷದ ಮಗುವಿನಂತೆ ಮುದ್ದಿಸುತ್ತಿದ್ದಳು. ಅವನು ಏನು ಮಾಡಿದರೂ ತಾಯಿಗೆ ಅದು ತಪ್ಪಾಗಿ ತೋರುತ್ತಿರಲಿಲ್ಲ. ಮಡಿಮೈಲಿಗೆ ಎಂದರೆ ಆಕೆಗೆ ಜೀವಕ್ಕಿಂತಲೂ ಹೆಚ್ಚು. ಆದರೂ ಒಂದು ದಿನ ಮೂರ್ತಿ ಶೂಜ಼ ಹಾಕಿಕೊಂಡು ಅಡಿಗೆಮನೆಯೊಳಗೆ ನುಗ್ಗಿದಾಗ 'ಪಾಪ, ಚಿಕ್ಕ ಹುಡುಗ, ಅವನಿಗೇನು ಗೊತ್ತು' ಎಂದು ಹೇಳಿ ಅವನನ್ನು ಕ್ಷಮಿಸಿದ್ದಳು. ಮೂರ್ತಿಗೂ ಹಾಗೆಯೇ-ಅಮ್ಮ ಎಂದರೆ ಪ್ರಾಣ. ಅವಳ ಮಾತುಗಳನ್ನು ಎಂದೂ ಮೀರುತ್ತಿರಲಿಲ್ಲ. ಕಾಲೇಜಿಗೆ ಎರಡು ದಿನ ರಜ ಸಿಕ್ಕಿದರೆ ಸಾಕು; ತಾಯಿಯನ್ನು ನೋಡುವುದಕ್ಕೆ ಹಳ್ಳಿಗೆ ಓಡಿ ಬರುತ್ತಿದ್ದ. ಅಣ್ಣ, ತಂಗಿ, ಸ್ನೇಹಿತ ಎಲ್ಲಾ ಅವನಿಗೆ ಅವನ ಅಮ್ಮ. ಅವಳ ಪ್ರೇಮಪೂರ್ಣವಾದ ಸವಿನುಡಿಗಳನ್ನು ಕೇಳುವುದಕ್ಕೆ ಮೂರ್ತಿಗೆ ಬಹಳ ಆಸೆ. ನೋಡಿದವರು ಅವರನ್ನು ತಾಯಿ-ಮಗ ಎನ್ನುವುದರ ಬದಲು ಸ್ನೇಹಿತರು ಎಂದು ಹೇಳುತ್ತಿದ್ದರು.

ಮೂರ್ತಿಯ ತಂದೆ ಬಹಳ ವಿಚಿತ್ರ ಪ್ರಕೃತಿಯ ಮನುಷ್ಯ. ಮೂರ್ತಿಯ ಮನಸ್ಸು ಎಷ್ಟು ಕೋಮಲವೋ ಅಷ್ಟೇ ಕಠಿಣ ಆತನ ಮನಸ್ಸು. ಹಣವನ್ನು ಶೇಖರಿಸುವುದಲ್ಲದೆ ಖರ್ಚು ಮಾಡುವುದೆಂದರೆ

ಅವನಿಗೆ ಪ್ರಾಣಸಂಕಟ. ಮೂರ್ತಿಯು ಸೂಟುಗಳನ್ನೂ ಶೂಗಳನ್ನೂ ನೋಡುವಾಗ ಹಣ ಕಳೆಯುವ ದುರ್ವ್ಯಸನವೆಂದು ಕಿಡಿಕಿಡಿಯಾಗುತ್ತಿದ್ದನು. ಮಗನ ಮೇಲೆ ಕೋಪ ಬಂದಾಗ ಹೆಂಡತಿಗೆ ಹೊಡೆಯುವುದು ಅವನ ಪದ್ಧತಿ. ತಾಯಿಗೆ ಕೊಡುವ ಕ್ರೂರ ಶಿಕ್ಷೆಯನ್ನು ನೋಡಲಾರದೆ ಮೂರ್ತಿ ತಂದೆಯೊಡನೆ ಹಣ ಕೇಳುವುದನ್ನೇ ಬಿಟ್ಟುಬಿಟ್ಟಿದ್ದನು. ತಂದೆಯೋ ಪ್ರತಿ ತಿಂಗಳ ಮೊದಲನೆಯ ತಾರೀಖಿನಲ್ಲಿ 'ಹಣ ಖರ್ಚು ಮಾಡುವುದು ಪಾಪ' ಎಂದು ಒಂದೂವರೆ ಗಜ ಕಾಗದ ಬರೆದು ಹದಿನೈದು ರೂಪಾಯಿಗಳನ್ನು ಕಳುಹಿಸುತ್ತಿದ್ದನು. ಮತ್ತೊಂದು ತಿಂಗಳ ಮೊದಲನೆಯ ತಾರೀಖಿನವರೆಗೂ ಆ ಹದಿನೈದು ರೂಪಾಯಿಗಳಲ್ಲಿ ಮೂರ್ತಿ ದಿನ ಕಳೆಯಬೇಕಿತ್ತು. ಮೂವತ್ತನೆಯ ತಾರೀಖಿನ ದಿನ ಮೂರ್ತಿ ಪ್ರತಿಯೊಂದು ಕಾಸಿನ ಲೆಕ್ಕವನ್ನು ಬರೆದು ತಂದೆಗೆ ಕಳುಹಿಸಬೇಕು. ಅವನು ಖರ್ಚು ಮಾಡಿದ್ದು ಸರಿ ಎಂದು ತೋರಿದರೆ ಮರುದಿನ ತಂದೆ ಹಣ ಕಳುಹಿಸುತ್ತಿದ್ದನು. ಇದಲ್ಲದೆ ಮೂರ್ತಿ ಪ್ರತಿವರ್ಷ ಪ್ರತಿ ಕ್ಲಾಸಿನಲ್ಲಿಯೂ ಮೊದಲನೆಯವನಾಗಿರಬೇಕೆಂದು ತಂದೆಯ ಇಚ್ಛೆ. ಹಿಂದಿನ ವರ್ಷ ಮೂರ್ತಿ ಸೆಕೆಂಡ್ ಕ್ಲಾಸಿನಲ್ಲಿ ಬಂದುದಕ್ಕಾಗಿ ಒಂದು ತಿಂಗಳು ಅವನೊಡನೆ ಮಾತಾಡಿರಲಿಲ್ಲ. ತಾಯಿಯ ಅತ್ಯಧಿಕ ಸ್ನೇಹವೇ ಇದಕ್ಕೆ ಕಾರಣವೆಂದು ಅವಳಿಗೂ ಬೇಕಾದಷ್ಟು ಏಟುಗಳು ಬಿದ್ದಿದ್ದವು.

ತಾಯಿಯ ಅಸಹನೀಯ ವೇದನೆಯನ್ನು ನೋಡಲಾರದೆ ಮೂರ್ತಿ ಹೇಗಾದರೂ ಮಾಡಿ ಈ ವರ್ಷ ಮೊದಲನೆಯವನಾಗಬೇಕೆಂದು ಹಗಲು ರಾತ್ರಿ ಓದುತ್ತಿದ್ದನು. ತಂದೆಯ ಈ ತರದ ಕಠೋರ ವ್ಯವಹಾರದಿಂದ ತಾಯಿಮಕ್ಕಳ ಪ್ರೇಮವು ದಿನದಿನಕ್ಕೆ ದೃಢವಾಗುತ್ತಿತ್ತು.

ಮೂರ್ತಿ ಊರಿಗೆ ಬಂದ ದಿನವೇ ಅವನ ತಂದೆ ಏನೋ ಕೆಲಸದ ಸಲುವಾಗಿ ಒಂದುವಾರ ಬೆಂಗಳೂರಿಗೆ ಹೋಗಬೇಕಾಯಿತು. ಆ ದಿನ ಅವನ ತಾಯಿ ಬೇಗ ಬೇಗನೆ ಕೆಲಸಗಳನ್ನೆಲ್ಲಾ ತೀರಿಸಿ ಮಗನೊಡನೆ ಮಾತಾಡುತ್ತಾ ಮನೆಯ ಮುಂದಿನ ಜಗುಲಿಯ ಮೇಲೆ ಕೂತಿದ್ದಳು.

ನೆರೆಮನೆಗಳ ಪುಟ್ಟ ಪುಟ್ಟ ಹುಡುಗಿಯರು ಒಳ್ಳೊಳ್ಳೆಯ ಸೀರೆಗಳನ್ನುಟ್ಟು
ಕೊಂಡು ನಗುನಗುತ್ತಾ ನವರಾತ್ರಿಯ ಬೊಂಬೆಗಳನ್ನು ನೋಡುವ
ಕುತೂಹಲದಿಂದ ರಸ್ತೆಯಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದರು. ಎಳೆ
ಪ್ರಾಯದ ಮಕ್ಕಳ ಆ ಆನಂದದ ನಲಿದಾಟವನ್ನು ನೋಡುತ್ತ ತಾಯಿ
ಮಗ ಇಬ್ಬರೂ ಮಾತುಗಳನ್ನು ಮರೆತು ಮೂಕರಂತೆ ಕೂತಿದ್ದರು.
ಮೂರ್ತಿಯ ತಾಯಿಗೆ ಮಕ್ಕಳೆಂದರೆ ಬಹಳ ಪ್ರೀತಿ. ರಸ್ತೆಯಲ್ಲಿ ಓಡಾ
ಡುತ್ತಿದ್ದ ಮಕ್ಕಳಲ್ಲಿ ಒಂದು ಮಗು (ಸುಮಾರು ನಾಲ್ಕು ವರ್ಷ
ಪ್ರಾಯದ್ದು) ಬಹಳ ಮುದ್ದಾಗಿತ್ತು. ಆ ಮಗುವಿಗೊಂದು ಪುಟ್ಟ ಸೀರೆ
ಉಡಿಸಿದ್ದರು. ಅದೇ ಮೊದಲನೆಯ ಸಾರಿ ಅದು ಸೀರೆ ಉಟ್ಟುದಾಗಿರ
ಬೇಕೆಂದು ತೋರುತ್ತದೆ. ಅದರ ಆನಂದವು ಮೇರೆ ಮೀರಿತ್ತು. ಗಾಳಿಗೆ
ಹಾರಾಡುತ್ತಿದ್ದ ಅದರ ಗುಂಗುರು ಕೂದಲುಗಳೂ ಉದ್ದವಾದ ರೆಪ್ಪೆಗಳ
ನಡುವಿನ ಕರಿತುಂಬಿಗಳಂತಹ ವಿಶಾಲವಾದ ಕಣ್ಣುಗಳೂ ಕೆಂಪುತುಟಿ
ಗಳಿಂದ ಒಪ್ಪುವ ಬಾಯಿಯೂ ನಗೆಯನ್ನು ಹೊರಚಲ್ಲುತ್ತಿದ್ದವು. ಏನೋ
ಒಂದು ಪದವನ್ನು ಹೇಳುತ್ತ ಕಂಕುಳಲ್ಲೊಂದು ಬೊಂಬೆಯನ್ನು ಎತ್ತಿ
ಕೊಂಡು ಆ ಮಗು ಸಂತೋಷವನ್ನು ಬೀರುತ್ತ ರಸ್ತೆಯಲ್ಲಿ ಬರುವು
ದನ್ನು ನೋಡಿ ಮೂರ್ತಿಯ ತಾಯಿ 'ಬಾಮ್ಮ ಪ್ರಭಾ' ಎಂದರು. ಆಕೆಯ
ಮಾತು ಕೇಳಿ ಪ್ರಭಾ ಓಡೋಡುತ್ತ ಬಂದು 'ಅತ್ತೆ ಬೊಂಬೆ ನೋದಿಲ್ಲಿ'
ಎಂದು ತನ್ನ ಬೊಂಬೆಯನ್ನು ತೋರಿಸತೊಡಗಿದಳು. ಮೂರ್ತಿಯ ತಾಯಿ
ಆ ಮುದ್ದಿನ ರಾಶಿಯನ್ನು ಎತ್ತಿಕೊಂಡು ಅವಳ ಕೆನ್ನೆಗಳಿಗೆ ಮುತ್ತು
ಕೊಟ್ಟು 'ನೋಡು ಮೂರ್ತಿ ಬಂದಿದ್ದಾನೆ, ಮಾತಾಡು' ಎಂದು ಹೇಳಿ
ಅವಳಿಗೆ ಕೊಡುವುದಕ್ಕೆ ತಿಂಡಿ ತರುವುದಕ್ಕಾಗಿ ಒಳಕ್ಕೆ ಹೋದರು.
ನನ್ನ ಬೊಂಬೆ ನೋಡು ಮೂತಿ' ಎಂದು ಸುರುಮಾಡಿದಳು ಪ್ರಭೆ
ಮೂರ್ತಿಯೊಡನೆ ಮಾತಿಗೆ. ಚಿಕ್ಕಂದಿನಿಂದಲೂ ಅವನಿಗೆ ಪರಿಚಯವಿತ್ತು
ಪ್ರಭೆಯದು. ನೆರೆಮನೆಯ ನಾರಾಯಣರಾಯರ ಮಗಳು ಅವಳು.
ನಳಿನಿ ಸಣ್ಣ ಪ್ರಭೆಯನ್ನು ಎತ್ತಿಕೊಂಡು ಅವನ ತಾಯಿಯೊಡನೆ ಹಿತ್ತಲು
ಬೇಲಿಯ ಹತ್ತಿರ ನಿಂತುಕೊಂಡು ಮಾತಾಡುತ್ತಿದ್ದಾಗ ಎಷ್ಟೋ ಸಾರಿ

ಮೂರ್ತಿ ಅವಳಿಂದ ಪ್ರಭೆಯನ್ನು ಎತ್ತಿಕೊಂಡು ಆಡಿಸಿದ್ದನು. ಹಳೆಯ ಸ್ನೇಹಿತರಿಬ್ಬರೂ ಜೊತೆಯಾದರೆ ಮಾತಿಗೆ ಕೊನೆ ಮೊದಲಿದೆಯೇ ? ಪ್ರಭೆ ಆ ದಿನ ತನ್ನ ಮನೆಗೆ ಹೋಗುವಾಗ ರಾತ್ರಿ ಎಂಟುಗಂಟೆ ಹೊಡೆದು ಹೋಗಿತ್ತು. ಮೂರ್ತಿಯೆ ಅವಳನ್ನು ಮನೆಗೆ ತಲುಪಿಸಿದ.

೨

ಮರುದಿನ ಬೆಳಗ್ಗೆ ಮೂರ್ತಿ ಹಿತ್ತಲಲ್ಲಿದ್ದ ಸಂಪಿಗೆಯ ಮರ ಹತ್ತಿ ತಾಯಿಗಾಗಿ ಹೂ ಕೊಯ್ಯುತ್ತಿದ್ದ. ಮರವು ಬಹಳ ಎತ್ತರವಾಗಿತ್ತು. ಎತ್ತರದ ಕೊಂಬೆಯೊಂದರ ಮೇಲೆ ಕುಳಿತು ಮೂರ್ತಿ ಹೂ ಕೊಯ್ಯುತ್ತಿದ್ದಾಗ, ನೆರೆಮನೆಯ ನಲಿನಿ ಪಾತ್ರೆ ಬೆಳಗುತ್ತಾ ಕೊಳದ ಹತ್ತಿರ ಕುಳಿತಿದ್ದುದನ್ನು ಕಂಡ. ಜಗುಲಿಯ ಮೇಲೆ ಮುದ್ದು ಪ್ರಭೆ ಎಳೆಗರು ಒಂದಕ್ಕೆ ಪುಟ್ಟ ಕೈಯಿಂದ ರೊಟ್ಟಿ ಕೊಡುತ್ತಿದ್ದಳು. ಪ್ರಭೆಯ ಸುಂದರವಾದ ಮುಖವು, ಬಾಲಸೂರ್ಯನ ಹೊಂಬಿಸಿಲು ಬಿದ್ದು ಅರಳಲನುವಾದ ಕಮಲದಂತೆ ತೋರುತ್ತಿತ್ತು. ಅವಳ ಚಪಲ ಚಂಚಲ ನಯನಗಳು ಸಂತೋಷದ ಸುಳಿನಗೆಯನ್ನು ಬೀರುತ್ತಿದ್ದುವು. ಜಡೆ ಹೆಣೆದಿರಲಿಲ್ಲ. ಕೂದಲೆಲ್ಲಾ ಕೆದರಿ ಮುಖವನ್ನು ಸುತ್ತಿ ಮುತ್ತಿಡುತ್ತಿದ್ದಂತೆ ಕಾಣುತ್ತಿತ್ತು. ಮೂರ್ತಿ ಅವಳನ್ನು ನೋಡನೋಡುತ್ತ ಲೋಕವನ್ನೇ ಮರೆತುಬಿಟ್ಟ. ಅಷ್ಟು ಸುಂದರವಾಗಿತ್ತು ಆ ಮುದ್ದುಮಗುವಿನ ನಿಷ್ಕಲಂಕವಾದ ರೂಪರಾಶಿ. ಪ್ರಭೆ ಮೂರ್ತಿಯನ್ನು ನೋಡಲಿಲ್ಲ. ರೊಟ್ಟಿ ಮುಗಿದೊಡನೆ ಇನ್ನೊಂದು ತರುವುದಕ್ಕಾಗಿ ಒಳಗೆ ಹೋದಳು. ಆಗ ಮೂರ್ತಿಗೆ ಪ್ರಜ್ಞೆಬಂತು. 'ಮುದ್ದು ಪ್ರಭೆ ಎಷ್ಟು ಮುದ್ದಾಗಿದ್ದಾಳೆ! ನನಗಂತಹ ಒಬ್ಬಳು ತಂಗಿ ಇದ್ದಿದ್ದರೆ–' ಎಂದು ನಿಟ್ಟುಸಿರುಬಿಟ್ಟು ಮೂರ್ತಿ ಹೂ ಕೊಯ್ಯತೊಡಗಿದ.

ಸ್ವಲ್ಪಹೊತ್ತಿನ ತರುವಾಯ ಮೂರ್ತಿ 'ಪ್ರಭೆ ಬಂದಳೇ' ಎಂದು ಆಕಡೆ ತಿರುಗಿ ನೋಡಿದ–ಬಂದಿರಲಿಲ್ಲ. ನಲಿನಿ ಮಾತ್ರ ಮೊದಲಿನಂತೆ ಪಾತ್ರೆ ಬೆಳಗುತ್ತಾ ಕೂತಿದ್ದಳು. ಅವಳ ಮುಖ ಕಾಣುತ್ತಿರಲಿಲ್ಲ. ಬೆನ್ನಿನ

ಮೇಲೆ ಹರಿದಾಡುತ್ತಿದ್ದ ಅವಳ ಉದ್ದವಾದ ಜಡೆ ಮಾತ್ರ ಮೂರ್ತಿಗೆ ಕಾಣಿಸುತ್ತಿತ್ತು. ಆ ಜಡೆಯ ಪರಿಚಯವೂ ಮೂರ್ತಿಗಿತ್ತು. ಆದುದರಿಂದಲೇ ಮೂರ್ತಿಗೆ ಪಾತ್ರೆ ಬೆಳಗುತ್ತಿದ್ದವಳು ನಲಿನಿ ಎಂದು ಗೊತ್ತು.

ನಲಿನಿ ಪ್ರಭೆಯ ದೊಡ್ಡಮ್ಮನ ಮಗಳು. ಅದೇ ಊರಿನವಳು. ತಾಯಿತಂದೆ ಇಲ್ಲದ ತಬ್ಬಲಿ. ನಲಿನಿ ಹುಟ್ಟಿದ ವರ್ಷವೇ ತಂದೆ ತೀರಿ ಹೋಗಿದ್ದ. ಎರಡು ವರ್ಷಗಳ ತರುವಾಯ ಅವಳ ತಾಯಿ ಆತ್ಮಹತ್ಯ ಮಾಡಿಕೊಂಡಿದ್ದಳು. ಅಂದಿನಿಂದ ಪ್ರಭೆಯ ತಾಯಿತಂದೆಯರೇ ನಲಿನಿಗೂ ತಾಯಿತಂದೆ. ಅವಳ ಚಿಕ್ಕಮ್ಮ ಅಕ್ಕನ ಅನಾಥ ಮಗಳನ್ನು ಬಹಳ ಆದರದಿಂದ ಸಾಕುತ್ತಿದ್ದಳು.

ನಲಿನಿಯ ತಾಯಿಯ ಆತ್ಮಹತ್ಯದ ವಿಷಯ ಜನರು ಅನೇಕ ವಿಧವಾಗಿ ಹೇಳುತ್ತಿದ್ದರು. ಸತ್ತುಹೋದ ತನ್ನ ತಾಯಿಯ ವಿಷಯವಾಗಿ ಜನರ ಮಾತು ಕೇಳಿ ಕೇಳಿ ನಲಿನಿಯ ಮನಸ್ಸು ನೊಂದುಹೋಗಿತ್ತು. ಅವಳ ಚಿಕ್ಕಪ್ಪ ಅವಳ ಮದುವೆಯ ಸಲುವಾಗಿ ಬಹಳ ಪ್ರಯತ್ನ ಪಟ್ಟಿದ್ದರೂ 'ತಾಯಿಯ ಶೀಲ ನಡತೆಗಳು ಚನ್ನಾಗಿರಲಿಲ್ಲ. ಮಗಳೂ ಅವಳ ದಾರಿ ಹಿಡಿಯದಿರಲಾರಳು' ಎಂದುಕೊಂಡು ಅವಳಿಗೆ ಹದಿನೈದು ವರ್ಷಗಳು ತುಂಬಿದ್ದರೂ ಯಾರೂ ಅವಳನ್ನು ಮದುವೆಯಾಗಿರಲಿಲ್ಲ. ಮೂರ್ತಿಗವಳದು ಚಿಕ್ಕಂದಿನಿಂದಲೂ ಗೊತ್ತು. ತಾಯಿ ಕೆಟ್ಟವಳಾದರೆ ಮಗಳ ಅಪರಾಧವೇನು? ಎಂದವನು ಕೇಳುತ್ತಿದ್ದ. ಮೂರ್ತಿ ಸಣ್ಣವನಾಗಿದ್ದಾಗ ನಲಿನಿಯೊಡನೆ ಆಡುತ್ತಿದ್ದ. ಮರದಿಂದ ಅವಳಿಗೆ ಹೂ ಕೊಯ್ದು ಕೊಡುತ್ತಿದ್ದ. ಅವಳಿಗೆ ಚಿತ್ರ ಬಿಡಿಸಿ ಕೊಡುತ್ತಿದ್ದ. ದೊಡ್ಡವನಾದಂತೆ ಅವರಿಬ್ಬರೊಳಗೆ ಮಾತುಕತೆ ನಿಂತುಹೋಗಿತ್ತು. ಮೂರ್ತಿ ಬೆಂಗಳೂರಿಗೂ ಹೋದ. ಇನ್ನೊಂದು ಕಾರಣವೇನಂದರೆ ಅವನ ತಂದೆ ನಲಿನಿಯೊಡನೆ ಮಾತನಾಡಕೂಡದೆಂದು ಮಾಡಿದ ಆಜ್ಞೆ. ಆಜ್ಞೆಗೆ ಮೂರ್ತಿ ಹೆದರದವನಾದರೂ ತಾಯಿಗೆ ತೊಂದರೆಯಾದೀತೆಂಬ ಭಯದಿಂದ ಸುಮ್ಮನಿದ್ದ. ಅವಳೊಡನೆ ಮಾತಾಡಿ ನಾಲ್ಕೈದು ವರ್ಷಗಳಾಗಿ ಹೋಗಿದ್ದವು. ಅವನಿಗೆ ಅವಳೊಡನೆ ಮಾತು ಬಿಡುವುದೂ ಕಷ್ಟವಾಗಿರಲಿಲ್ಲ. ಬೆಂಗಳೂರಿಗೆ

ಹೋದ ಮೇಲಂತೂ 'ನಲಿನಿ' ಎಂಬ ವ್ಯಕ್ತಿ ಈ ಲೋಕದಲ್ಲಿದೆ ಎಂಬುದನ್ನೇ ಅವನು ಮರೆತುಬಿಟ್ಟಿದ್ದ. ಈಗವಳ ಜಡೆ ನೋಡಿದೊಡನೆ ಅವನಿಗೆ ಹಿಂದಿನ ದಿನಗಳ ಚಿಕ್ಕ ನಲಿನಿಯ ಸ್ಮರಣೆಯಾಯಿತು. ಅವಳಿಗೆ ಹೂಗಳ ಮೇಲಿದ್ದ ಪ್ರೇಮ ನೆನಪಾಯ್ತು. ನಾಲ್ಕು ಹೂ ಕೊಯಿದುಕೊಟ್ಟರೆ ತಪ್ಪೇನು ಎಂದುಕೊಂಡು ತುಂಬ ಹೂಗಳಿದ್ದ ಒಂದು ಸಣ್ಣ ಕೊಂಬೆಯನ್ನು ಮುರಿದು ಅವಳು ಕೂತಿದ್ದ ಕಡೆಗೆ ಎಸೆದನು. ಸದ್ದು ಕೇಳಿ ಅವಳು ತಿರುಗಿ ನೋಡಿದಳು. ಮೂರ್ತಿ ಅವಳ ಮುಖ ನೋಡಿದ. ಅಂದು ತನ್ನೊಡನೆ ಮರಹತ್ತಿ, ಬೇಲಿ ಮುರಿದು ಕಲ್ಲೆಸೆದು ಓಡಾಡುತ್ತಿದ್ದ ನಲಿನಿಯ ನಗು ಮುಖದ ಬದಲು, ಹೇಳಲಾರದಂತಹ ಯಾವುದೋ ಒಂದುತರದ ಸಹನಾತೀತ ವೇದನೆಯನ್ನು ಮುಚ್ಚಲಾಗದಿದ್ದರೂ ಮುಚ್ಚಲು ಯತ್ನಿಸುವ ಮುಖದ ನಲಿನಿಯನ್ನು ನೋಡಿ ಕೋಮಲ ಪ್ರಕೃತಿಯ ಮೂರ್ತಿ 'ಅಯ್ಯೋ' ಅಂದುಕೊಂಡ. ನಲಿನಿ ಬಿದ್ದಿದ್ದ ಹೂಗಳನ್ನು ನೋಡಿದಳು. ಮರದ ಮೇಲಿದ್ದ ಮೂರ್ತಿ ಅವಳಿಗೆ ಕಾಣಿಸಲಿಲ್ಲ. ಗಾಳಿಗೆ ಬಿದ್ದಿರಬಹುದೆಂದು ಯೋಚಿಸಿ ಕೈಗಳನ್ನು ತೊಳೆದುಕೊಂಡು ಹೂಗಳನ್ನು ತೆಗೆದುಕೊಂಡಳು.

ಹೂವನ್ನು ಕೈಗೆ ತೆಗೆದುಕೊಳ್ಳುವಾಗ ಮುಚ್ಚಿದ್ದ ಮೋಡಗಳ ನಡುವಿನಿಂದ ಒಂದು ನಿಮಿಷ ಇಣಿಕಿನೋಡಿದ ಬಿಸಿಲಿನಂತೆ ಅವಳ ಮುಖದಲ್ಲಿ ಎಳೆನಗೆಯೊಂದು ಮೂಡಿ ಮಾಯವಾಯಿತು. ಬೇಕಾದ್ದಕಿಂತಲೂ ಹೆಚ್ಚಿನ ಬಹುಮಾನ ಆ ನಗುವೊಂದರಲ್ಲೇ ದೊರೆಯಿತೆಂದುಕೊಂಡು ಮೂರ್ತಿ ಅವಳಿಗೆ ಗೊತ್ತಾಗದಂತೆ ಮರವಿಳಿದು ತಾಯಿಯನ್ನು ಹುಡುಕುತ್ತ ಒಳಗೆ ಹೋದ.

೩

ಪ್ರಭೆ ಸುಂದರಿ ಎಂಬುದರಲ್ಲಿ ಸಂದೇಹವಿಲ್ಲ. ಬೆಳಗಿನ ಹೊತ್ತು ಸೂರ್ಯನುದಯಿಸುವುದನ್ನು ಇದಿರು ನೋಡುತ್ತ ಅರಳಲನುವಾದ ಕಮಲದಂತೆ ಅವಳ ಮುಖ. ನಲಿನಿ ಪ್ರಭೆಯಂತೆ ಸುಂದರಿಯಲ್ಲ. ಆದರೆ

ಅಪರೂಪದಲ್ಲೆಲ್ಲಾದರೂ ಒಂದು ನಗು ನಳಿನಿಯ ದುಃಖಾವೃತವಾಗಿದ್ದ ಮುಖದಲ್ಲಿ ಮೂಡಿದರೆ ಆಗವಳ ಮುಖವು ಅರೆಬಿರಿದ ಕುಸುಮದದಂತೆ ತೋರುತ್ತಿತ್ತು. ಪ್ರಭೆಯ ಬಣ್ಣ ಗುಲಾಬಿಮಿಶ್ರಿತವಾದ ಬಿಳುಪು. ನಳಿನಿ ಕಪ್ಪುಮಿಶ್ರಿತವಾದ ಕೆಂಪು. ಪ್ರಭೆಯ ಕಣ್ಣುಗಳು ಚಪಲಚಂಚಲ. ಸ್ಥಿರ ಗಂಭೀರ ನಳಿನಿಯ ಕಣ್ಣುಗಳು. ಆ ಕಣ್ಣುಗಳು ಏನನ್ನಾದರೂ ನೋಡುತ್ತಿರುವಾಗ ಹೇಳಲಸಾಧ್ಯವಾದ ಒಂದು ತರದ ಲಾವಣ್ಯವು ಅವಳ ಮುಖದ ಮೇಲೆ ನಲಿಯುತ್ತಿತ್ತು; ಬೆಳಕನ್ನು ತೋರಿಸಿದರೆ ಜಿಂಕೆ ಮರಿ ಆಶ್ಚರ್ಯದಿಂದ ನೋಡುವಾಗ ಹೇಗೋ ಹಾಗೆ.

ಮೂರ್ತಿ ಮೂರು ದಿನಗಳಿಂದಲೂ ಮರಹತ್ತಿ ನಳಿನಿಗೆ ತಿಳಿಯದಂತೆಯೇ ಅವಳು ಪಾತ್ರೆ ಬೆಳಗುವಾಗ ಅವಳನ್ನು ನೋಡುತ್ತಿದ್ದನು. ಪ್ರಭೆಯನ್ನು ತಿಂಡಿ ಕೊಟ್ಟು ಮನೆಗೆ ಕರತಂದು ಹೂ ಕೊಟ್ಟು ಕಳುಹಿಸುತ್ತಿದ್ದ, ನಿನ್ನ ತಾಯಿಗೆ ಕೊಡೆಂದು ಹೇಳಿ. ನಳಿನಿಗೂ ಅದು ತಲುಪುವುದೆಂದು ಅವನಿಗೆ ಗೊತ್ತು. ಚಿಕ್ಕಂದಿನ ತುಂಟಾಟಿಕೆಯ ನಳಿನಿಯು ಎಂದೂ ಮಾಡದಿದ್ದ ಅಧಿಕಾರವನ್ನು, ಸ್ಥಿರ-ಗಂಭೀರ ನಯನಗಳ ನಳಿನಿಯ ರೂಪವು ಮೂರ್ತಿಯ ಹೃದಯದ ಮೇಲೆ ನಡೆಸತೊಡಗಿತು.

ಮೂರ್ತಿಯ ತಾಯಿಗೂ ಅನಾಥೆ ನಳಿನಿಯ ಮೇಲೆ ಅಪಾರ ಪ್ರೇಮ. ಗಂಡನು ಊರಿನಲ್ಲಿಲ್ಲದಾಗ ಅವಳನ್ನೂ ಪ್ರಭೆಯನ್ನೂ ಮನೆಗೆ ಕರೆದುಕೊಂಡುಬಂದು ಜಡೆಹೆಣೆದು ತಿಂಡಿ ಕೊಟ್ಟು ಉಪಚರಿಸುತ್ತಿದ್ದಳು. ನಳಿನಿಯ ವಿಷಾದಮಯಜೀವನಕ್ಕಾಗಿ ಎಷ್ಟೋ ಸಾರಿ ಯಾರಿಗೂ ಕಾಣದಂತೆ ಅವಳು ಕಣ್ಣೀರು ಸುರಿಸಿದ್ದಳು. 'ದೇವರೇ, ನಳಿನಿ ಒಳ್ಳೆಯವನ ಮಡದಿಯಾಗಿ ಸುಖಸಂತೋಷದಿಂದಿರುವಂತೆ ಮಾಡು' ಎಂದವಳು ನಳಿನಿಯನ್ನು ನೋಡಿದಾಗಲೆಲ್ಲಾ ಮನಸ್ಸಿನಲ್ಲಿಯೇ ಮೊರೆಯಿಡುತ್ತಿದ್ದಳು.

ಮೂರ್ತಿ ಬಂದು ಆರು ದಿನಗಳಾಗಿದ್ದವು. ಆ ದಿನ ಸಾಯಂಕಾಲ ಅವನ ತಾಯಿ ಹಿತ್ತಲು ಜಗುಲಿಯ ಮೇಲೆ ಕುಳಿತು ನಳಿನಿಯ ತಲೆ ಬಾಚುತ್ತಿದ್ದಳು. ಮೂರ್ತಿ ಮರಹತ್ತಿ ಹೂ ಕೊಯ್ಯುತ್ತಿದ್ದ ನಳಿನಿಗಾಗಿ. ಪ್ರಭೆ

ಮರದ ಕೆಳಗೆ ನಿಂತು ಪುಟ್ಟ ಕೈಗಳನ್ನು ಮೇಲೆ ಚಾಚಿ ಹೂ ಬೇಡುತ್ತಿದ್ದಳು. ಅವಳಿಗೆ ಮೂರ್ತಿ ಮೇಲಿಂದ ಒಂದು ಹೂ ಎಸೆದ. ಅದನ್ನು ಆಯ್ದುಕೊಂಡು 'ನಲಿನಿಗೆ' ಎಂದಳು ಪ್ರಭೆ. 'ಅವಳೇ ಕೇಳಿದರೆ ಕೊಡುತ್ತೇನೆ' ಎಂದ ಮೂರ್ತಿ. ಮೂರ್ತಿ ಅವಳನ್ನು ಆರು ದಿನಗಳಿಂದ ನೋಡುತ್ತಿದ್ದರೂ ಅವಳವನನ್ನು ನೋಡಿದ್ದು ಆ ದಿನ. ಅವನೊಡನೆ ಮಾತಾಡದೆ ನಾಲ್ಕೈದು ವರ್ಷಗಳಾಗಿವೆ. ಹಿಂದೆ ಅವಳೊಡನೆ ಆಡುತ್ತಿದ್ದ ಮೂರ್ತಿ ಈಗ ದೊಡ್ಡವನಾಗಿದ್ದಾನೆ. ಕಾಲೇಜಿನಲ್ಲಿ ಬಿ. ಎ. ಓದುತ್ತಿದ್ದಾನೆ. ಬಹಳ ನಾಚಿಕೆಯಾಯಿತು ನಲಿನಿಗೆ ಮೂರ್ತಿಯ ಮಾತು ಕೇಳಿ. ಹೂಗಳ ಮೇಲೆ ಅವಳಿಗೆ ಬಲು ಪ್ರೀತಿಯಾದರೂ 'ಮೂರ್ತಿಯೊಡನೆ ಕೇಳಲಾರೆ' ಎಂದುಕೊಂಡಳು. ಆದರೆ ಅವನ ತಾಯಿ 'ಅದೇಕೆ ನಲಿನಾ, ಕೇಳಬಾರದೇ! ಮೂರ್ತಿಯೊಡನೆಯೂ ಸಂಕೋಚವೇ' ಎಂದಳು. ಮೂರ್ತಿಯ ಮಾತು ಕೇಳಿ ನಾಚಿಕೆಯಿಂದ ಬಗ್ಗಿದ್ದ ಮುಖವನ್ನು ಮತ್ತಷ್ಟು ಬಗ್ಗಿಸಿಕೊಂಡು 'ಮೂರ್ತಿ, ನನಗೊಂದು ಹೂ' ಎಂದಳು. ಅವಳು ಕೇಳಿದ್ದು ಒಂದು ಹೂ, ಆದರೆ ಮೂರ್ತಿ ಕೆಳಗಿಳಿದು ಬಂದು ಬುಟ್ಟಿಯಲ್ಲಿದ್ದ ಎಲ್ಲಾ ಹೂಗಳನ್ನೂ ಸುರಿದುಬಿಟ್ಟ ಅವಳ ತಲೆಯ ಮೇಲೆ. ನಾಚಿಕೆಯಿಂದ ನೆಲವನ್ನು ನೋಡುತ್ತಿದ್ದ ನಲಿನಿಯ ಕಣ್ಣುಗಳು ಕೃತಜ್ಞತೆಯ ಪುಟ್ಟ ನಗುವೊಂದರೊಡನೆ ಮೂರ್ತಿಯ ಮುಖವನ್ನು ಮೆಲ್ಲನೊಂದು ಸಾರಿ ನೋಡಿ ರೆಪ್ಪೆಗಳ ಮರೆಯಲ್ಲಿ ಅಡಗಿಬಿಟ್ಟವು. ಮೂರ್ತಿಯ ತಾಯಿ 'ನೋಡು; ಬಾಚಿದ ತಲೆ ಎಲ್ಲಾ ಹುಡುಗಾಟ ಮಾಡಿ ಕೆದರಿಬಿಟ್ಟೆ' ಎಂದು ನಕ್ಕರು. ಚಿಕ್ಕ ಪ್ರಭೆ 'ನನಗೆ ಮಾತ್ರ ಬಾರದೇ ಹೂ-ನಲಿನಿಗೆ ತುಂಬ' ಎಂದು ಜಗಳವಾಡತೊಡಗಿದಳು.

ಮೂರ್ತಿಗೆ ಯಾರ ಮಾತುಗಳೂ ಕೇಳಿಸಲಿಲ್ಲ. ನಲಿನಿಯು ನಗುವಿನೊಡನೆ ನೋಡಿದ ನೋಟವು ಮಾತ್ರ ಅವನ ಕಣ್ಣೆದುರಿನಲ್ಲಿ ನಲಿದಾಡುತ್ತಿತ್ತು.

೪

ಮೂರ್ತಿಯ ರಜ ತೀರಿಹೋಯಿತು. ಮರುದಿನ ಬೆಳಗಿನ ಎಂಟು ಗಂಟೆಯ ಬಸ್ಸಿನಲ್ಲಿ ಹೊರಡಬೇಕಾಗಿತ್ತು. ಹೊರಡುವ ಸನ್ನಾಹಗಳೆಲ್ಲವೂ

ಪೂರೈಸಿದ್ದವು. ನಲಿನಿಯನ್ನು ನೋಡುವುದು ಮಾತ್ರ ಬಾಕಿ ಇತ್ತು. ಆದರವಳನ್ನು ನೋಡುವುದು ಹೇಗೆ? ಅವಳು ಪಾತ್ರೆ ಬೆಳಗುವುದಕ್ಕೆ ಕೊಳದ ಹತ್ತಿರ ಬರುವ ಮೊದಲೇ ಬಸ್ಸು ಹೊರಟು ಹೋಗುತ್ತಿತ್ತು.

ಅವಳನ್ನು ನೋಡುವುದಕ್ಕೆಂದೇ ಅವರ ಮನೆಗೆ ಹೋಗುವುದು ಅಸಾಧ್ಯದ ಕೆಲಸ. ಪ್ರಭೆಯ ನೆವಸದಿಂದ ಹೋಗುವುದೆಂದರೆ ಅವಳು ಬೆಳಗಿನಿಂದಲೂ ಇವನ ಮನೆಯಲ್ಲೇ ಇದ್ದಾಳೆ. ನಲಿನಿಯನ್ನು ನೋಡುವುದು ಸಾಧ್ಯವಿಲ್ಲ ಎಂದು ನಿಟ್ಟುಸಿರುಬಿಟ್ಟು ತಂದೆ–ತಾಯಿಯವರಿಗೆ ನಮಸ್ಕರಿಸಿ ಮನೆಯ ಬಾಗಿಲಲ್ಲಿ ಬಂದುನಿಂತ ಬಸ್ಸನ್ನು ಹತ್ತಿದ. ಮಗನನ್ನು ಕಳುಹಿಸುವಾಗ ತಾಯಿಗೆ ಬೇಸರವಾದರೂ ಮಗನ ಮುಖವನ್ನು ನಗುನಗುತ್ತಾ ನೋಡಿ 'ದೇವರೇ, ನನ್ನ ಮಗುವನ್ನು ರಕ್ಷಿಸುವ ಭಾರ ನಿನ್ನದು' ಎಂದು ಮನಸ್ಸಿನಲ್ಲಿಯೇ ಬೇಡಿಕೊಂಡಳು.

ಬೆಂಗಳೂರು ತಲುಪಿ ಎರಡು ವಾರಗಳಾದ ತರುವಾಯ ಮೂರ್ತಿ ನಲಿನಿಯ ವಿಷಯವಾಗಿ ತಾಯಿಗೊಂದು ಕಾಗದ ಬರೆದ. ನಲಿನಿಯನ್ನು ತಾನು ಮದುವೆಯಾಗಬೇಕೆಂಬ ಬಯಕೆಯನ್ನು ಸೂಚಿಸಿ ಅವಳ ವಿಷಯವಾಗಿ ತನಗೆ ಬರೆಯಬೇಕೆಂದು ಬೇಡಿಕೊಂಡಿದ್ದ. ತಾಯಿಗೆ ಮಗನ ಮದುವೆ, ಅದರಲ್ಲೂ ನಲಿನಿ ಸೊಸೆಯಾಗುವಾಕೆ ಎಂದು ತಿಳಿದು ಸಂತೋಷವೇ ಆದರೂ ತನ್ನ ಗಂಡನು ಈ ಮದುವೆಯಾಗದಂತೆ ಮಾಡುವನೆಂದು ಅವಳಿಗೆ ಗೊತ್ತಿದ್ದುದರಿಂದ, ಮೂರ್ತಿಯ ಕಾಗದ ಓದಿ ಅವಳಿಗೆ ಸಂತೋಷಕ್ಕಿಂತ ಹೆಚ್ಚಾಗಿ ವ್ಯಸನವೇ ಉಂಟಾಯಿತು.

ನಲಿನಿಯ ಅಪರಾಧವಲ್ಲದಿದ್ದರೂ ಅವಳನ್ನು ತಿರಸ್ಕರಿಸುವುದಕ್ಕೆ ಮೂರ್ತಿಯ ತಂದೆಗಿದ್ದ ಕಾರಣವು ಬಹಳ ಬಲವಾದುದೇ ಆಗಿತ್ತು. ಅವಳ ತಾಯಿಯ ಆತ್ಮಹತ್ಯಕ್ಕೆ ಜನರಿಗೆ ಗೊತ್ತಿಲ್ಲದಿದ್ದರೂ ತಾನೇ ಕಾರಣನೆಂದು ಅವನ ಮನಸ್ಸಿಗೆ ಗೊತ್ತಿತ್ತು. ಮೂರ್ತಿಗಾಗಲೀ ಅವನ ತಾಯಿಗಾಗಲೀ ಈ ವಿಷಯ ತಿಳಿಯದು. ಆದರೂ ಇಬ್ಬರಿಗೂ ಗೊತ್ತು, ನಲಿನಿಯನ್ನು ಸೊಸೆಮಾಡಿಕೊಳ್ಳುವುದಕ್ಕೆ ಅವನು ವಿರೋಧಿಸುವನೆಂದು.

ಮಗನಿಗೆ ಬರೆಯುವಾಗ ತಾಯಿ ನಳಿನಿಯ ವಿಷಯವೆಲ್ಲವನ್ನೂ ಬರೆಯು ವಳು. ಅವಳು ಸೊಸೆಯಾದರೆ ತನ್ನ ಸಂತೋಷಕ್ಕೆ ಮಿತಿಯಿರಲಾರದು ಎಂದುಕೊಳ್ಳುವಳು. ಗಂಡನನ್ನು ಯೋಚಿಸುವಾಗ ಮಾತ್ರ ಅವಳ ಆಸೆ ಎಲ್ಲಾ ನಿರಾಶೆಯಾಗುವುದು.

ದಿನಗಳೊಂದೊಂದಾಗಿ ಕಳೆದವು. ಮೂರ್ತಿ ಮಾತ್ರ ನಿರಾಶೆಗೆಡೆ ಗೊಡದೆ ಉತ್ಸಾಹದಿಂದ ಆನಂದದಿಂದ ಓದತೊಡಗಿದ; ಓದಿ ಪಾಸಾಗಿ ಕೆಲಸ ಸಂಪಾದಿಸಿ ತಾಯಿಯನ್ನು ತಂದೆಯ ಕ್ರೂರತನದಿಂದ ಪಾರು ಮಾಡುವುದಕ್ಕಾಗಿ–ನಳಿನಿಯನ್ನು ಮದುವೆಯಾಗುವುದಕ್ಕಾಗಿ.

ಕೊನೆಗೆ ಪರೀಕ್ಷೆಯ ದಿನವೂ ಬಂತು. ಚೆನ್ನಾಗಿ ಓದಿದ್ದ ಮೂರ್ತಿಗೆ ಕಷ್ಟವಾಗಲಿಲ್ಲ. ಚೆನ್ನಾಗಿಯೇ ಮಾಡಿದ. ಪರೀಕ್ಷೆ ಮುಗಿದು ರಜ ಸಿಕ್ಕು ವುದೇ ತಡ–ಹೊರಟು ಬಿಟ್ಟ ಊರಿಗೆ. ಎಂದಿನಂತೆ ತಾಯಿಯನ್ನು ಮಾತ್ರ ನೋಡುವ ಉತ್ಸಾಹದಿಂದಲ್ಲ–ನಳಿನಿಯನ್ನೂ ಕಾಣಬಹುದೆಂಬ ಆತುರದಿಂದ.

ತಂದೆಗೆ ಮಗ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿರುವನೆಂದು ಸ್ವಲ್ಪ ಸಮಾಧಾನವಾಗಿತ್ತು. ಅವನ ದುರುಗುಟ್ಟುವ ಕಣ್ಣುಗಳಲ್ಲಿ ಮೂರ್ತಿ ಯನ್ನು ನೋಡುವಾಗ ಮಳೆಗಾಲದ ಬಿಸಿಲಿನಂತೆ ಪ್ರೇಮದ ಸುಳಿ ಯೊಂದು ಸುಳಿದು ಮಾಯವಾಗುತ್ತಿತ್ತು. ಅವನ ತಾಯಿಯ ಮೇಲೂ ಕೋಪ ಕಡಿಮೆಯಾಗಿತ್ತು. ತಂದೆಯ ಮನಸ್ಸು ಸಮಾಧಾನ, ಶಾಂತತೆ ತಾಳಿರುವುದನ್ನು ನೋಡಿ ಮೂರ್ತಿ ನಳಿನಿಯ ಸುದ್ದಿ ಎತ್ತಲು ಸು– ಸಮಯವನ್ನು ಕಾಯುತ್ತಿದ್ದ.

ಮೂರ್ತಿ ಊರಿಗೆ ಬಂದು ನಾಲ್ಕುದಿನಗಳಾಗಿದ್ದವು. ಆ ದಿನ ಮಧ್ಯಾಹ್ನ ಊಟಮಾಡಿ ಕೈತೊಳೆಯುವುದಕ್ಕೆ ಬಚ್ಚಲುಮನೆಗೆ ಹೋಗಿ ಹಿಂತಿರುಗುತ್ತಿದ್ದ. ಅಂಗಳವನ್ನು ದಾಟಿಕೊಂಡು ಹೋಗಬೇಕು ಬಚ್ಚ ಲಿಗೆ. ಅಂಗಳಕ್ಕೆ ಬರುವಾಗ ಬೇಲಿಯ ಹತ್ತಿರ ನಿಂತು ಪ್ರಭೆ 'ಮೂರ್ತೀ' ಎಂದಳು. ಮೂರ್ತಿ ಹತ್ತಿರಹೋಗಿ ಪ್ರಭೆಯನ್ನು ಎತ್ತಿ ಬೇಲಿ ದಾಟಿ ಸಿದ. ಅವಳೂ ಊಟಮಾಡಿ ಬಂದವಳು. ಕೈ ತೊಳೆದೇ ಇರಲಿಲ್ಲ.

'ನಲಿನಾ ಕೈ ತೊಳ್ಳೋಕ್ಕೆ ಬತ್ತಾಳೆ. ಇಲ್ಲಿ ಅಡ್ಕೋತೀನಿ. ಮಾತಾ ಬೇಡ' ಎಂದು ಅಲ್ಲೇ ಕೂತುಬಿಟ್ಟಳು. ನಲಿನಿಯ ಹೆಸರು ಕೇಳಿದ ಕೂಡಲೆ ಮೂರ್ತಿ ತಾನೂ ಅಲ್ಲೇ ನಿಂತುಬಿಟ್ಟ. ನಾಲ್ಕೈದು ನಿಮಿಷ–ಮೂರ್ತಿಗೆ ನಾಲ್ಕೈದು ಗಂಟೆ–ಗಳ ತರುವಾಯ ನಲಿನಿ ಚಂಬಿನಲ್ಲಿ ನೀರನ್ನು ತೆಗೆದು ಕೊಂಡು ಬಂದು 'ಪ್ರಭಾ' ಎಂದು ಕೂಗಿದಳು. ಪ್ರಭೆ ಮಾತಾಡಲಿಲ್ಲ. ಮೆಲ್ಲಮೆಲ್ಲನೆ ಹಿಂದಕ್ಕೆ ಸರಿದು ಅವಳಿಗೆ ಕಾಣದಾತೆಯೇ ಮೂರ್ತಿಯ ಮನೆಯೊಳಗೆ ನುಗ್ಗಿಬಿಟ್ಟಳು. ಪ್ರಭೆಯನ್ನು ಕಾಣದೆ ನಲಿನಿ ಬೇಲಿಯ ಹತ್ತಿರ ಬಂದಳು. ಮೂರ್ತಿ ನಿಂತಿದ್ದಾನೆ! ನೋಡಿ ನಾಚಿಕೆಯಿಂದವಳ ಮುಖವು ಕೆಂಪಾಗಿಹೋಯಿತು. ಹಿಂತಿರುಗತೊಡಗಿದಳು. ಮೂರ್ತಿ 'ನಲಿನಾ ಓಡೋದೇಕೆ; ನಾನೇನು ಹುಲಿಯೆ?' ಎಂದ. 'ಪ್ರಭೆ ಕೈ ತೊಳಸ್ಬೇಕು. ಎಲ್ಲೋ ಅಡಗಿಕೊಂಡಿದ್ದಾಳೆ' ಎಂದುಕೊಂಡು ಒಂದು ಹೆಜ್ಜೆ ಮುಂದಿಟ್ಟಳು. 'ಪ್ರಭೆ ನಮ್ಮನೇಲಿದ್ದಾಳೆ. ಒಂದು ನಿಮಿಷ ನಿಲ್ಲು ನಲಿನಾ' ಎಂದ ಮೂರ್ತಿ ಅತಿ ದೈನ್ಯವಾಗಿ. ನಲಿನಿ ಹಿಂತಿರುಗಿ 'ಕೆಲಸ ಏದೆ ಏನು?' ಎಂದಳು.

'ಏನು ನಲಿನಾ, ಇಷ್ಟೊಂದು ನಾಚಿಕೆ ನನ್ನೊಡನೆ! ಗುರುತೇ ಇಲ್ಲವೇ ನನ್ನದು? ನನ್ನೊಡನೆ ಜಗಳಾಡುತ್ತಿದ್ದುದೆಲ್ಲಾ ಮರೆತು ಹೋಯಿತೆ?' ಎಂದ ಮೂರ್ತಿ.

'ಆಗ ನಾವು ಚಿಕ್ಕೋರಾಗಿದ್ದೆವು; ಆಗಿನ ಮಾತೇಕೆ ಈಗ–' ನಲಿನಿ ಉತ್ತರವಿತ್ತು ಹಿಂತಿರುಗಲನುವಾದಳು.

'ಸ್ವಲ್ಪ ತಡೆ ನಲಿನಾ–ಏಷ್ಟೊಂದು ಅವಸರ–ಆಗ ಚಿಕ್ಕವಳಾಗಿದ್ದೆ. ಹಳೆಯ ಸ್ನೇಹಿತನೊಡನೆ ಎರಡು ಮಾತೂ ಆಡಬಾರದಷ್ಟು ದೊಡ್ಡ ಮನುಷ್ಯಳಾಗಿ ಬಿಟ್ಟಿದ್ದೀಯಾ ಈಗ?'

'ಹಾಗಲ್ಲ ಮೂರ್ತಿ, ನಾನಂದದ್ದು ಹಾಗಲ್ಲ.'

'ಮತ್ತೇಗೆ ನಲಿನಾ?'

ಒಳಗಿನಿಂದ 'ನಲಿನಾ–ನಲಿನಾ–ನಲಿನಾ' ಎಂದು ಅವಳ ಚಿಕ್ಕಪ್ಪ ಕೂಗಿದರು.

'ಕೂಗುತ್ತಾರೆ, ಕೆಲಸವಿದೆ, ಹೋಗಬೇಕು.'

ನಳಿನಿ ಮೂರ್ತಿ ಮರುಮಾತೆತ್ತುವುದರೊಳಗೆ ಓಡಿ ಬಿಟ್ಟಳು.

ನಳಿನಿ ಮಾಯವಾದೊಡನೆ ಮೂರ್ತಿಯ ಮುಖ ಮೋಡ ಮುಸುಕಿನ ಚಂದ್ರನಂತಾಯಿತು.

ಕೂಗುತ್ತಾರೆ! ಕೆಲಸವಿದೆ!! ಹೋಗಬೇಕು!!

ನಳಿನ—ತನ್ನ ನಳಿನ ಬೇರೆಯವರ ಒಂದು ಕೂಗಿಗೆ ಓಡಬೇಕು! ಹೃದಯವು ಹಾತೊರೆಯುತ್ತಿದ್ದರೂ ತನಗವಳನ್ನು ಹತ್ತಿರ ನಿಲ್ಲಿಸಿಕೊಳ್ಳುವ ಅಧಿಕಾರವಿಲ್ಲ. . . .

ತಂದೆಯೊಡನೆ ಮಾತಾಡಿ ಆ ಅಧಿಕಾರವನ್ನು ಪಡೆಯುವುದಕ್ಕೆ ಶಕ್ತನಾಗಲೇಬೇಕೆಂದು ನಿರ್ಧರಿಸಿ ಒಳಗೆ ಹೋದ. ತಾಯಿ ಊಟಮಾಡುತ್ತಿದ್ದಳು. ಹತ್ತಿರವೇ ಪ್ರಭೆ ಕೂತು ಏನೇನೋ ಮಾತಾಡುತ್ತಿದ್ದಳು. ಎಂದಿನಂತೆ ತಾಯಿ ಹತ್ತಿರ ಕೂತು ಮಾತಿಗಾರಂಭಿಸದೆ ನಡುಮನೆಗೆ ಹೋದ. ಅವನ ತಂದೆ ಪೇಪರ್ ಓದುತ್ತಾ ಕೂತಿದ್ದರು. ಮಗನನ್ನು ಕಂಡು ಪೇಪರ್ ಮೇಜಿನ ಮೇಲಿರಿಸಿ ಆಶ್ಚರ್ಯದಿಂದ ಅವನ ಮುಖ ನೋಡಿದರು. ಏಕೆಂದರೆ ಯಾವಾಗಲೂ ಮೂರ್ತಿ ತಂದೆಯನ್ನು ಹುಡುಕಿಕೊಂಡು ಹೋಗುವುದು ವಾಡಿಕೆಯಾಗಿರಲಿಲ್ಲ. ತಂದೆಯ ಇದಿರು ಧೈರ್ಯವಾಗಿ ನಿಂತು ಮಾತಾಡುವುದು ಮೂರ್ತಿಯ ಜೀವನದಲ್ಲಿ ಇದೇ ಮೊದಲನೆಯ ಸಲ. ಮೂರ್ತಿಯ ಮಾತುಗಳನ್ನು ಕೇಳಿ ಮೊದಲವನ ತಂದೆ ವಿಸ್ಮಯದಿಂದ ಕಲ್ಲಿನ ಪ್ರತಿಮೆಯಂತೆ ಕುಳಿತಿದ್ದನು. ಕೊನೆಗೆ ಅವನ ಮಾತುಗಳ ಅರ್ಥವು ಸರಿಯಾಗಿ ತಿಳಿದ ಮೇಲೆ ಕಠಿಣ ಸ್ವರದಿಂದ ಒಂದೇ ಒಂದು ಶಬ್ದದಲ್ಲಿ ಪ್ರತ್ಯುತ್ತರವಿತ್ತನು:—

'ಆಗದು.'

ಮೂರ್ತಿ ಈ ಉತ್ತರವನ್ನು ಮೊದಲೇ ನಿರೀಕ್ಷಿಸುತ್ತಿದ್ದ. ಆದುದರಿಂದ ಅಪ್ರತಿಭನಾಗಲಿಲ್ಲ. ಧೈರ್ಯದಿಂದ ದೃಢವಾಗಿ ಹೇಳಿದ: 'ನಾನು ಅವಳನ್ನೇ ಮದುವೆಯಾಗುತ್ತೇನೆ. ನಿಮ್ಮ ಇಚ್ಛೆಗೆ ವಿರೋಧವಾಗಿ ನಡೆಯುವುದಕ್ಕೆ ಕ್ಷಮಿಸಿ.'

೬

ಮೂರ್ತಿ ಯೂನಿವರ್ಸಿಟಿಯಲ್ಲಿ ಮೊದಲನೆಯವನಾಗಿ ಪಾಸಾದ. ಪಾಸಾದುದೊಂದೇ ಅಲ್ಲ—ಐಶ್ವರ್ಯವಂತನಾದ ಜಮೀನ್ದಾರನೊಬ್ಬನಲ್ಲಿ ಪ್ರೈವೇಟ್ ಟ್ಯೂಟರ್ ಕೆಲಸವೂ ಸಿಕ್ಕಿತು. ಅವನ ಪ್ರೊಫೆಸರುಗಳ ಶಿಫಾರಸು ಹಾಗೂ ಅವನ ಯೋಗ್ಯತೆಯ ಫಲವಾಗಿ ಸಂಬಳವೂ ಕಡಿಮೆಯಾಗಿರಲಿಲ್ಲ. ಬಹಳ ದಿನಗಳ ಬಯಕೆ ಕೈಗೂಡಿ ಮೂರ್ತಿ ಸ್ವತಂತ್ರನಾದ. ತಾಯಿಯನ್ನು ತನ್ನೊಡನೆ ಇರಿಸಿಕೊಂಡ. ನಲಿನಿಯನ್ನು ಮದುವೆಯಾಗುವದೊಂದು ಬಾಕಿ.

ಆದರೆ ಎಲ್ಲಾ ಬಯಕೆಗಳೂ ಯಾರಿಗೂ ಪೂರ್ತಿಯಾಗುವಂತಿಲ್ಲ. ಆ ವರ್ಷ ಅವನ ತಾಯಿ ವಿಷಮಶೀತಜ್ವರದಿಂದ ಮಗನ ತೊಡೆಯ ಮೇಲೆ ತಲೆಯಿಟ್ಟುಕೊಂಡು 'ನಲಿನಿಯನ್ನು ಮದುವೆಯಾಗಿ ಸುಖವಾಗಿ ಬಾಳು ನನ್ನ ಕಂದಾ' ಎಂದಾಶೀರ್ವಾದಮಾಡಿ ಪರಲೋಕಯಾತ್ರೆ ಮಾಡಿದಳು.

ಮೂರ್ತಿಯ ಆಶೆಯ ಗೋಪುರ ಮುರಿದುಬಿತ್ತು. ಅವನ ಜೀವನದ ಧ್ರುವತಾರೆ ಅದೃಶ್ಯವಾಯಿತು. ಅವನ ಸುಖ—ದುಃಖ, ಆನಂದ ಉತ್ಸಾಹಗಳಲ್ಲಿ ಅಂದಿನ ವರೆಗೆ ಭಾಗಿಯಾಗಿದ್ದು ಅವನ ಮೇಲೆ ಪ್ರೇಮದ ಮಳೆಯನ್ನು ಸುರಿಸುತ್ತಿದ್ದ ತಾಯಿ ಇಲ್ಲವಾದಳು. ಜೀವನವು ಸುಖ ಸಂತೋಷಮಯವೆಂದಿದ್ದ ಮೂರ್ತಿಗೆ ಅದು ಸಾರರಹಿತವೆನಿಸಿತು.

ತಂದೆಯಂತೂ ನಲಿನಿಯ ವಿಷಯದಲ್ಲಿ ಮಗನಿಗಿದ್ದ ಭಾವನೆಯನ್ನು ತಿಳಿದಂದಿನಿಂದ ಅವನೊಡನೆ ಮಾತೇ ಆಡುತ್ತಿರಲಿಲ್ಲ. ಇನ್ನುಳಿದವರಾರು! ನಲಿನಿ—ನಲಿನಿ—ನಲಿನಿ! ಅವಳಿಲ್ಲದೆ ಬದುಕುವುದು ಅಸಾಧ್ಯ.

ಒಂದು ವರ್ಷದ ತರುವಾಯ ತಂದೆಯ ಇಚ್ಛೆಗೆ ವಿರೋಧವಾಗಿ ಮೂರ್ತಿ ನಲಿನಿಯನ್ನು ಮದುವೆಯಾದ. ಧಾರೆಯಾದುದೊಂದೇ ತಡ. ಅವಳ ಎರಡು ಕೈಗಳನ್ನೂ ಹಿಡಿದುಕೊಂಡು ಅವಳ ಕಣ್ಣುಗಳನ್ನೇ ನೋಡಿ ನಗುನಗುತ್ತಾ ಮೂರ್ತಿ ಕೇಳಿದ: 'ನಲಿನಾ, ನನ್ನ ನಲಿನಾ,

ಇನ್ನು 'ಕೂಗುತ್ತಾರೆ, ಕೆಲಸವಿದೆ, ಹೋಗಬೇಕು' ಎಂದು ಓಡಬೇಕಾದುದಿಲ್ಲವಲ್ಲ. ಎಷ್ಟು ಹೊತ್ತು ಬೇಕೆಂದರೆ ಅಷ್ಟು ಹೊತ್ತು ಮಾತಾಡುವ ಅಧಿಕಾರವೀಗ ನನಗೆ ಬಂತಲ್ಲ.'

ಪ್ರೇಮಾಶ್ರುಗಳನ್ನು ಸುರಿಸುತ್ತಾ ನಲಿನಿ ಕೋಮಲ ಸ್ವರದಲ್ಲಿ ಪ್ರತ್ಯುತ್ತರವಿತ್ತಳು—'ನನ್ನ ದೇವರೇ, ನಿನ್ನ ದಯೆ.'

ಆ ದಿನ ರಾತ್ರಿ ನಲಿನಿಯ ಬೇಡಿಕೆಯನುಸಾರ ಮೂರ್ತಿ ಬರೆದ ಕ್ಷಮಾಯಾಚನೆಯ ಪತ್ರವನ್ನೋದುತ್ತಾ ಅವನ ತಂದೆ 'ನನ್ನ ಪಾಪದ ಪ್ರಾಯಶ್ಚಿತ್ತವಿದು' ಎಂದು ನಿಟ್ಟುಸಿರು ಬಿಟ್ಟರು. ಮರುದಿನ ಹಾಸಿಗೆಯಿಂದೇಳುವಾಗ ದಿಂಬೆಲ್ಲಾ ಪಶ್ಚಾತ್ತಾಪದ ಕಣ್ಣೀರಿನಿಂದ ತೋಯ್ದು ಒದ್ದೆಯಾಗಿಹೋಗಿತ್ತು.

ಜನವರಿ ೧೯೩೫

# ಅಪರಾಧಿ ಯಾರು ?

## ೧

ಅಣ್ಣಾ,

ನಾನು ಬರೆದ ಹಿಂದಿನ ಕಾಗದವು ನಿನಗೆ ತಲುಪಿರಬಹುದು. ಅದಕ್ಕೆ ನೀನು ಪ್ರತ್ಯುತ್ತರವನ್ನು ಬರೆಯುವ ಮೊದಲೇ ಈ ಕಾಗದವನ್ನು ನೋಡಿ ನಿನಗೆ ಆಶ್ಚರ್ಯವಾಗಲೂ ಬಹುದು. ಆಶ್ಚರ್ಯದ ವಿಷಯವೇ ಇರುವುದರಿಂದ ನಿನಗಿದನ್ನು ಬರೆಯುತ್ತಿರುವೆನು.

ನಮ್ಮ ಮನೆಯ ಪಕ್ಕದ ಮನೆಯಲ್ಲಿದ್ದ ನಾಗೇಶರಾಯರದು ನಿನಗೆ ಗೊತ್ತಿದೆ. ಗೊತ್ತಿದೆ ಎಂದರೆ ನಿನಗವರ ಗುಣಗಳೆಲ್ಲಾ ಗೊತ್ತಿರಲಾರದು. ಈ ಮನೆಗೆ ನಾವು ಮೊದಲು ಬಂದ ಸುರುವಿನಲ್ಲಿ ಅವರನ್ನು ನೋಡಿ 'ಕ್ರೂರಿಯ ಕಣ್ಣುಗಳಂತಿವೆ ರಾಯರ ಕಣ್ಣುಗಳು' ಎಂದು ಹೇಳಿಕೊಂಡು ನಗುತ್ತಿದ್ದುದು ನಿನಗೆ ಮರೆತುಹೋಗಿರಲಾರದು. ಚಿಕ್ಕತನದ ತಂಟೆಯಲ್ಲಿ ತಮಾಷೆಗಾಗಿ ನಾವಾಡಿದ ಮಾತುಗಳು ಈಗ ನಿಜವಾಗಿ ಪರಿಣಮಿಸಿವೆ. ನಾವು ಊಹಿಸಿದುದಕ್ಕಿಂತಲೂ ಹೆಚ್ಚಿನ ನೀಚರವರು. ನಾನೇಕೆ ಅವರ ಗುಣವರ್ಣನೆ ಮಾಡುತ್ತಿರುವೆನೆಂದು ನೀನು ಹುಬ್ಬುಗಂಟಿಕ್ಕಬಹುದು. ಸ್ವಲ್ಪ ಸಮಾಧಾನ ತಾಳಿಕೋ; ನಾನೀ ಕಾಗದ ಬರೆಯುತ್ತಿರುವುದೇ ಅವರ ನೀಚತನಕ್ಕೆ ಬಲಿಯಾಗಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವ ಪಾರ್ವತಿಗಾಗಿ. ಪಾರ್ವತಿ ಯಾರೆಂದು ಗೊತ್ತೇ? ನಮಗೆ ಕನ್ನಡವನ್ನು ಕಲಿಸುತ್ತಿದ್ದರಲ್ಲ—ಆ ಪಂಡಿತರ ಮಗಳು. ಪಂಡಿತರು

ಪಾರ್ವತಿಯನ್ನು ಮದುವೆ ಮಾಡಿದ ವರ್ಷವೇ ಸತ್ತುಹೋದದ್ದು ನಿನಗೆ ತಿಳಿದಿದೆ. ಕಳೆದ ವರ್ಷ ಅವಳ ಪತಿಯೂ ಬೇಕಾದಷ್ಟು ಸಾಲ ಮಾಡಿಟ್ಟು ಅವರ ದಾರಿ ಹಿಡಿದ. ಅಂದಿನಿಂದ ಅನಾಥೆ ಪಾರ್ವತಿ ಅವಳ ಚಿಕ್ಕ ಮಗು ವನ್ನು ಸಾಕುವುದಕ್ಕೆ ಬೇರೇನೂ ಉಪಾಯ ತೋರದೆ ನಾಗೇಶರಾಯರ ಮನೆಯಲ್ಲಿ ಅಡಿಗೆಯ ಕೆಲಸಕ್ಕೆ ನಿಂತಳು. ಇದು ಒಂದು ವರ್ಷದ ಹಿಂದಿನ ಮಾತು.

ಮಗುವಿಗೋಸ್ಕರವಾಗಿ ರಾಯರ ಅತ್ಯಾಚಾರವನ್ನು ಸಹಿಸಿ ಕೊಂಡಿದ್ದ ಪಾರ್ವತಿಯನ್ನು ರಾಯರು ಅಪವಾದದ ಹೊರೆಯೊಡನೆ ಬಹಿಷ್ಕಾರವನ್ನೂ ಹಾಕಿಸಿ ಮೊನ್ನೆ ಮನೆಯಿಂದ ಹೊರದೂಡಿರುವರು. ನಿನ್ನೆ ರಾತ್ರಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ಮಗುವಿ ನೊಡನೆ ಬಾವಿಯ ಹತ್ತಿರ ನಿಂತಿದ್ದಳಂತೆ. ಗ್ರೈಬಿ ರಾತ್ರಿ ತಪ್ಪಿಸಿಕೊಂಡು ಹೋದ ದನವನ್ನು ಹಿಡಿದುಕೊಂಡು ಬರುವುದಕ್ಕೆ ಹೋಗಿದ್ದಾಗ ಅವಳನ್ನು ಕಂಡು ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದಿ ದ್ದಾಳೆ. ಬಲಾತ್ಕಾರದಿಂದ ಗ್ರೈಬಿ ಅವಳನ್ನು ಕರೆದುಕೊಂಡು ಬಾರದಿದ್ದರೆ ಈ ದಿನ ತಾಯಿ ಮಗುವಿನ ಶವಗಳನ್ನು ಬಾವಿಯಿಂದ ತೆಗೆಯಬೇಕಾಗು ತ್ತಿತ್ತು. ನೋಡಿದೊಡನೆಯೇ ನನಗವಳ ಗುರುತುಸಿಕ್ಕಿತು.

ನನ್ನನ್ನು ನೋಡಿ ಪಾಪ—ಮುಖವನ್ನು ಮುಚ್ಚಿಕೊಂಡು ಅಳ ತೊಡಗಿದಳು. ರಾತ್ರಿ ನಿದ್ರೆಯೇ ಮಾಡಲಿಲ್ಲ. ಹಸಿದಿದ್ದ ಮಗುವಿಗೆ ಸ್ವಲ್ಪ ಹಾಲು ಕುಡಿಸಿದ್ದಾಳೆ. ಎಷ್ಟು ಹೇಳಿದರೂ ತಾನೇನೂ ಮುಟ್ಟು ವುದಿಲ್ಲ. ನಿನ್ನೆಯಿಂದಲೂ ಉಪವಾಸ. ನಿನಗಿದೆಲ್ಲಾ ಏಕೆ ಬರೆಯುತ್ತಿರುವೆ ನೆಂದರೆ ಈ ವಿಷಯದಲ್ಲಿ ನಿನ್ನ ಸಹಾಯವು ಅತ್ಯಗತ್ಯವಾದುದರಿಂದ. ಎಲ್ಲಿ ಹೋಗುವುದು, ಏನು ಮಾಡುವುದು ಎಂದು ಅವಳಿಗೆ ತಿಳಿಯದಾಗಿದೆ. ಜಾತಿಯವರು ಸೇರಿಸುವಂತಿಲ್ಲ. ಇಲ್ಲಿಂದ ನಾವು ಹೊರಗೆ ಕಳುಹಿಸಿದರೆ ಬಾವಿಯೇ ಅವಳಿಗೆ ಗತಿಯಾಗುವುದು. ಏನು ಮಾಡುವಿ ಎಂದು ಕೇಳಿದರೆ 'ಇಲ್ಲೇ ಇದ್ದುಬಿಡುತ್ತೇನೆ; ಈ ಮಗುವಿನ ಸಲುವಾಗಿ ನೀವಾದರೂ ಆಶ್ರಯ ಕೊಡಿ' ಎಂದು ಅಳುತ್ತಾಳೆ. ಆದುದರಿಂದ ನೀನು ಇಲ್ಲಿಗೆ

ಬಂದರೆ ಅವಳನ್ನು ಶಾಸ್ತ್ರೋಕ್ತವಾಗಿ ನಮ್ಮ ಜಾತಿಗೆ ಸೇರಿಸಿ ಅವಳ ಮುಂದಿನ ಜೀವನಕ್ಕೆ ದಾರಿ ಮಾಡಬಹುದು.

ಅಣ್ಣ, ಅವಳ ತಂದೆ ಪಂಡಿತರು ತಮ್ಮ ಜಾತಿಯನ್ನು ಹೊಗಳಿಕೊಳ್ಳುತ್ತಿದ್ದುದು ನಿನಗೆ ಜ್ಞಾಪಕವಿರಬಹುದು. ಅನಾಥ ಅಬಲೆಯರು ಅತ್ಯಾಚಾರಿಯ ಅತ್ಯಾಚಾರಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೇ ಅವರ ಜಾತಿಯ ನೀತಿಯಾದರೆ ನಮಗಾ ಜಾತಿಯಲ್ಲಿ ಜನ್ಮ ಕೊಡದಿದ್ದುದಕ್ಕಾಗಿ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ. ಇದನ್ನು ನೋಡುವುದಕ್ಕೆ ಪಂಡಿತರು ಇದ್ದಿದ್ದರೆ ತಮ್ಮ ಜಾತಿಯ ವಿಷಯದಲ್ಲಿದ್ದ ಭಾವನೆಯನ್ನವರು ಬದಲು ಮಾಡಬೇಕಾಗಿ ಬರುತ್ತಿತ್ತು. ಇರಲಿ; ಈ ಕಾಗದವನ್ನು ನೋಡಿದೊಡನೆ ನೀನು ಬರುವಿಯಾಗಿ ಆಶಿಸುವ,

ನಿನ್ನ ಪ್ರೀತಿಯ ತಂಗಿ,

ಉನ್ನೀಸಾ

೨

ಸೀತಮ್ಮನವರೇ,

ಬಹಳ ದಿನಗಳಿಂದಲೂ ನಿಮಗೆ ಕಾಗದ ಬರೆಯಬೇಕೆಂದು ಆಲೋಚಿಸಿಕೊಂಡಿದ್ದೇನೆ. ಬರೆಯುವುದಕ್ಕೆ ಮಾತ್ರ ಸ್ವಲ್ಪವೂ ಸಮಯವಾಗುವುದಿಲ್ಲ ನೋಡಿ; ಈಗಲಾದರೂ ಸಮಯ ಸಿಕ್ಕಿತೇ ಎಂದು ನೀವು ಕೇಳಬಹುದು. ನಿಜವನ್ನು ಹೇಳುವುದಾದರೆ ಈಗಲೂ ಇಲ್ಲ. ಕಮಲೆಗೆ ಜ್ವರ; ಅವಳಿಗೆ ಔಷಧಿ ಕುಡಿಸಿಲ್ಲ. ರಘುವನ್ನು ಇನ್ನೂ ಸ್ನಾನಮಾಡಿಸಿಲ್ಲ. ಅಡಿಗೆಯೂ ಆಗಿಲ್ಲ. ಆದರೂ ನಿಮಗೊಂದು ವಿಶೇಷದ ಸುದ್ದಿ ತಿಳಿಸಿಬಿಡಬೇಕೆಂದು ಕೆಲಸಗಳನ್ನೆಲ್ಲಾ ಬಿಟ್ಟು ಬರೆಯುವುದಕ್ಕೆ ಕೂತಿದ್ದೇನೆ.

ಆ ಪಾರ್ವತಿ ನೋಡಿ—ಬೊಂಬೆಯ ಹಾಗೆ ಅಲಂಕಾರಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ—ಆ ಪಂಡಿತರ ಮಗಳು—ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ ನೋಡಿ—! ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಲೆಗೆ ಕಳುಹಿಸುವಾಗಲೇ ನನಗೆ ಗೊತ್ತಿತ್ತು—ಅವಳು ಹೀಗಾಗುವಳೆಂದು ! ಇದು ಬೇರೆ ತಮಾಷೆ ನೋಡಿ—ಪಕ್ಕದ

ಮನೆ ಲಕ್ಷ್ಮಿ ಇದ್ದಾಳಲ್ಲ—ಈ ಜಾತಿಗೇಡಿಯ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದವಳು—ಅವಳನ್ನುತ್ತಾಳೆ ಕೇಳಿ:— 'ಸೇರದೆ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವುದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ ಬಾವಿಯ ದಾರಿ ತೋರಿಸಿದ ನಿಮಗೆ ಅವಳೇನಾದರೇನು?' ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ! ಜಾತಿ ಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳಬೇಕಾಗಿತ್ತಂತೆ! ನೋಡಿದಿರಾ ಹೇಗಿದೆ ಎಂತ!!

ಹೊತ್ತಾಗಿ ಹೋಯಿತು; ಅಡಿಗೆ ಮಾಡಬೇಕು—ಇನ್ನೊಮ್ಮೆ ಬಿಡುವಿದ್ದಾಗ ಬರೆಯುತ್ತೇನೆ.

ನಿಮ್ಮ,

.........

೩

ನಳಿನಿ,

ಬಹಳ ದಿವಸಗಳಾದವು ನಿನ್ನ ಕಾಗದಗಳೊಂದೂ ಬಾರದೆ. ಏಕೆ ಬರೆಯುವುದಿಲ್ಲ? ಕಣ್ಮರೆಯಾದೊಡನೆಯೇ ಮರೆತುಹೋಯಿತೇನು? ಸಹಜ; ಬೇಕಾದಷ್ಟು ಹೊಸ ಗೆಳತಿಯರು ಸಿಕ್ಕಿರುವಾಗ ಹಳೆಯ ಹಳ್ಳಿಯ ಸ್ನೇಹಿತೆಯೊಬ್ಬಳನ್ನು ಜ್ಞಾಪಿಸಿಕೊಳ್ಳುವುದು ಕಷ್ಟ. ಆದರೆ ನೀನೆಷ್ಟು ನನ್ನನ್ನು ಮರೆಯುವುದಕ್ಕೆ ಯತ್ನಿಸಿದರೂ ಯತ್ನದಲ್ಲಿ ಸಫಲತೆಯನ್ನು ಪಡೆದರೂ ನಾನು ಮಾತ್ರ ಆಗಾಗ ಕಾಗದಗಳನ್ನು ಬರೆದು 'ಈ ಪ್ರಪಂಚದಲ್ಲಿ ನಾನೊಬ್ಬಳಿದ್ದೇನೆ' ಎಂಬುದನ್ನು ನಿನಗೆ ಜ್ಞಾಪಿಸದೆ ಬಿಡುವುದಿಲ್ಲ. ನನ್ನ ಹತ್ತು ಕಾಗದಗಳಿಗೆ ನೀನು ಒಂದೇ ಒಂದು ಕಾಗದವನ್ನಾದರೂ ಬರೆಯದಿದ್ದರೆ ನಾನೇ ಅಲ್ಲಿಗೆ ಬಂದು ನಿನ್ನ ಅತ್ಯಮೂಲ್ಯವಾದ ಸಮಯವನ್ನು ನನ್ನೊಡನೆ ಮಾತಿಗಾಗಿ ಉಪಯೋಗಿಸಿಕೊಳ್ಳುತ್ತೇನೆ. ಈ ಬೆದರಿಕೆಗೆ ನೀನು ಹೆದರದಿರಲಾರೆ. ಏಕೆಂದರೆ ಚಿಕ್ಕವರಾಗಿರುವಾಗ ನಾನು

ಕೀಟಲೆ ಮಾಡತೊಡಗಿದರೆ ನೀನೂ ಪಾರ್ವತಿಯೂ ಹೆದರಿ ನಾನು ಕೇಳಿ ದುದನ್ನು ಕೊಡುತ್ತಿದ್ದಿರಿ.

ನೆನಪಿದೆಯೇ ನಲಿನಿ !—ಆಗಿನ ಆಟ, ತಮಾಷೆ, ಜಗಳ, ನಗು ಎಲ್ಲಾ ! ಆಗ ನಾವು ಶಾಲೆಯ ಹಿಂದಿನ ದಿಣ್ಣೆಯ ಮೇಲೆ ಕುಳಿತು ನಮ್ಮ ಮುಂದಿನ ಜೀವನವನ್ನು ಚಿತ್ರಿಸಿಕೊಳ್ಳುತ್ತಿದ್ದುದು ! ನಾವು ಕಲ್ಪಿಸಿ, ನೋಡಿ ನಲಿಯುತ್ತಿದ್ದ ಹಗಲು ಕನಸುಗಳ ಸ್ಮೃತಿ ! ಆಗ ನಾವು ಜೀವ ನವು ಸುಖ–ಸಂತೋಷಮಯ ಎಂದು ತಿಳಿದಿದ್ದೆವಲ್ಲ ನಲಿನಾ ! ಈಗ ನಮ್ಮೆಲ್ಲೆಷ್ಟು ಜನರು ಆ ಭಾವನೆಯನ್ನು ಬದಲಾಯಿಸಬೇಕಾಗಿ ಬಂದಿದೆ ನೋಡು. ನಮ್ಮ ಗೆಳತಿ ಸೀತೆಯನ್ನು ನೋಡು—ಅವಳು ಬಯಸುತ್ತಿದ್ದ ಬಯಕೆಗಳೆಲ್ಲಿ ? ಈಗವಳನುಭವಿಸುತ್ತಿರುವ ಯಾತನೆಗಳೆಲ್ಲಿ ! ನಾವೆಂದಾ ದರೂ ಅವಳ ಗತಿ ಹೀಗಾಗಬಹುದೆಂದು ಎಣಿಸಿದ್ದೆವೇ ? ಕ್ಲಾಸಿನಲ್ಲಿ ಹುಚ್ಚಿ ಎಂದು ನಾವು ಹಾಸ್ಯ ಮಾಡುತ್ತಿದ್ದ ಉಮಾ ಈಗ ನೋಡು— ದೊಡ್ಡ ಸಮಾಜ ಸುಧಾರಕಳಾಗಿ ಬಿಟ್ಟಿದ್ದಾಳೆ. ಅವಳ ಮಾತುಗಳನ್ನು ಕೇಳಲು ಜನರು ಹಾತೊರೆಯುವುದನ್ನು ನೋಡಿದರೆ 'ಅಂದಿನ ಉಮಾ ಇವಳೇನು ?' ಎನ್ನಿಸುತ್ತದೆ. 'ಮದುವೆಯಾಗುವುದೇ ಇಲ್ಲ' ಎನ್ನುತ್ತಿದ್ದ ಶಾಂತೆಗೆ ಈಗ ಇಬ್ಬರು ಮಕ್ಕಳಿದ್ದಾರೆ. ಕ್ಲಾಸಿನಲ್ಲಿ ಮೊದಲನೆಯವಳಾಗಿ ಬುದ್ಧಿವಂತೆ ಎನ್ನಿಸಿಕೊಳ್ಳುತ್ತಿದ್ದ ಕಮಲೆಗೆ ಅತ್ತೆಯ ಮನೆಯಲ್ಲಿ ದಡ್ಡಿ, ಮೂದೇವಿ ಎಂದು ಬಿರುದುಗಳು ಬಂದಿವೆ.

ಇವುಗಳೆಲ್ಲವುಗಳಿಗಿಂತಲೂ ವಿಷಾದಕರವಾದ ಇನ್ನೊಂದು ಸುದ್ದಿ ಇದೆ ನಲಿನಾ—ಅದೂ ನಮ್ಮ ಪ್ರೀತಿಯ ಪಾರ್ವತಿಯ ವಿಷಯ—ಹೇಗ ದನ್ನು ಬರೆಯಲಿ ಹೇಳು ?

ಸೌಂದರ್ಯ, ಗುಣ, ನಡತೆಗಳಲ್ಲಿ ನಮ್ಮೆಲ್ಲರ ಮೆಚ್ಚಿಕೆಯನ್ನು ಪಡೆ ದಿದ್ದ ಪಾರ್ವತಿ ವಿಧವೆಯಾದದ್ದೂ, ನಾಗೇಶರಾಯರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದುದೂ ನಿನಗೆ ಗೊತ್ತಿದೆ. ಅವಳ ಭವಿಷ್ಯವನ್ನು ನಾವು ಚಿತ್ರಿಸಿದಂತೆ ಇನ್ನಾರದನ್ನು ಚಿತ್ರಿಸಿದ್ದೆವು ನಲಿನಾ ! 'ನಮ್ಮ ಸುಂದರಿ,

ರಾಜನ ರಾಣಿ ಕಿರೀಟ ಧಾರಿಣಿ 'ಯಾಗುವಳೆಂದು ಹೇಳಿಕೊಂಡು ನಾವು ನಲಿಯುತ್ತಿದ್ದೆವಲ್ಲ! ಅವಳೀಗ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವಳು ನಲಿನಾ–ರಾಯರ ಪಾಪದ ಪ್ರತಿಫಲವಾಗಿ. ಇದೇ ನೋಡು–ನಮ್ಮ ಸಮಾಜದ ನ್ಯಾಯ. ನಮ್ಮ ಜಾತಿ, ನೀತಿ, ಸಮಾಜ ಉತ್ತಮವೆಂದು ಹೇಳಿಕೊಂಡು ನಾವೆಷ್ಟು ಸಲ ಉನ್ನೀಸಳೊಡನೆ ಜಗಳವಾಡಿಲ್ಲ! ಮುಸಲ್ಮಾನ ಜಾತಿಯವಳೆಂದು ಎಷ್ಟು ಸಾರಿ ಉನ್ನೀಸಳನ್ನು ತಿರಸ್ಕರಿಸಿಲ್ಲ! ಊರು ತುಂಬ ನಮ್ಮವರ ಮನೆಗಳಿದ್ದೂ ಪಾರ್ವತಿಗೆ ಬಾಗಿಲನ್ನು ತೆರೆಯುವವರಿರಲಿಲ್ಲ. ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ. ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ. ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು, ನಮ್ಮ ಜಾತಿಯ ದೊಡ್ಡತನದ ಕುರುಹು.

ಉತ್ತಮ, ಅತ್ಯುತ್ತಮ ಜಾತಿಯ ನಮ್ಮವರು ಪಾರ್ವತಿಗೆ ಅವಳ ಮುದ್ದುಮಗುವಿನೊಡನೆ ಬಾವಿಯ ದಾರಿಯನ್ನು ತೋರಿಸಿಕೊಟ್ಟಾಗ ಕೈಹಿಡಿದು ಆದರದಿಂದ ಆಶ್ರಯವಿತ್ತವಳು ಯಾರು ಗೊತ್ತೇ? ಉನ್ನೀಸ! ಮ್ಲೇಂಛಳೆಂದು ನಾವು ನಕ್ಕು ತಿರಸ್ಕರಿಸುತ್ತಿದ್ದ ಉನ್ನೀಸ! ಈಗ ಹೇಳು ನಲಿನಾ, ಉತ್ತಮರು ಯಾರೆಂದು?

ಊರವರೆಲ್ಲರೂ ಪಾರ್ವತಿಯನ್ನು ಮುಸಲ್ಮಾನ ಜಾತಿಗೆ ಸೇರಿದವಳೆಂದು ತಿರಸ್ಕರಿಸುತ್ತಿರುವರು. ಮೊದಲೇ ನಮಗೆ ಅವಳು ಹಾಗಾಗುವಳೆಂದು ಗೊತ್ತಿತ್ತು ಎನ್ನುವರು. ಇಷ್ಟೆಲ್ಲಾ ತಿಳಿದವರು ಅವಳು ಹಾಗಾಗದಿರುವಂತೆ ಮಾಡಲು ಯಾವ ಯತ್ನವನ್ನೂ ಮಾಡಲಿಲ್ಲವೇಕೆ? ಎಂದು ನಾನು ಕೇಳಿದೆ. ಅದಕ್ಕಾಗಿ ಪಾರ್ವತಿಯ ಪಕ್ಷವೆಂದು ನೀರಿಗೆ ಹೋದಲ್ಲಿ ಎಂದಿನಂತೆ ನೆರೆಕರೆಯವರು ನನ್ನೊಡನೆ ಮಾತಾಡುವುದಿಲ್ಲ.

ಅಪರಾಧಿ ಯಾರು ನಲಿನಾ? ಪಾರ್ವತಿ ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ? ರಾಯರೆ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ?

ಕಂ
ಬ
ನಿ

ಕಂ
ಬ
ನಿ

ಯಾರಾದರೇನು ? ಆದುದಾಗಿಬಿಟ್ಟಿತು. ಪಾರ್ವತಿಯಾಗಿ ಅವಳು ಸುಖದಲ್ಲಿರಲಿಲ್ಲ. ರಜಿಯಾ ಆಗಿಯಾದರೂ ಅವಳ ಜೀವನವು ಸುಖಮಯ ವಾಗಲೆಂದು ದೇವರಲ್ಲಿ ನನ್ನ ಬೇಡಿಕೆ.

ಸಾಕು; ಇನ್ನೇನು ಬರೆಯಲಿ—

ನಿನ್ನ,

ಲಕ್ಷ್ಮಿ

೪

ತಾರೀಖು ೮ರ ಸ್ಥಳಿಕ ಪತ್ರಿಕೆಯೊಂದರಲ್ಲಿ ಹೀಗಿತ್ತು:—

ಮೊನ್ನೆ ದಿನ ಹಿಂದೂ-ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದುದು ಊರಿನ ಹಿಂದೂಗಳಿಗೆಲ್ಲಾ ಬಹಳ ವಿಷಾದನನ್ನುಂಟು ಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದ ಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನು ಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನ ವಾಯಿತು.

ನವಂಬರ ೧೯೩೪

# ಹೋಗಿಯೇ ಬಿಟ್ಟಿದ್ದ !

ಒಮ್ಮೊಮ್ಮೆ ಕಲ್ಪನೆಗಿಂತಲೂ ನಿಜವು ಆಶ್ಚರ್ಯಕರವಾಗಿರುತ್ತದೆ. ಕೆಲವು ವೇಳೆ ಕಟ್ಟುಕತೆಯೋ ಎನ್ನುವಷ್ಟು ಅಸ್ವಾಭಾವಿಕವೂ ಆಗಿರುತ್ತದೆ. ಈಗ ನಾನು ಹೇಳುವ ವಿಷಯವೂ ಆ ಜಾತಿಗೆ ಸೇರಿದ್ದು. ಕೇಳಿದವರು ಇದು ಖಂಡಿತ ನನ್ನ ಕಲ್ಪನೆಯ ಪರಿಣಾಮವೆಂದು ಹೇಳದಿರಲಾರರು. ಅದಕ್ಕೋಸ್ಕರವಾಗಿಯೇ ಈ ವಿಷಯಕ್ಕೆ ಸಂಬಂಧಪಟ್ಟ ಪತ್ರಿಕೆಗಳನ್ನೆಲ್ಲ ನಾನು ಜೋಪಾನವಾಗಿಟ್ಟಿರುವುದು. ಯಾರಿಗೆ ಸಂಶಯವಿದೆಯೋ ಅವರು ಬಂದು ಇವುಗಳನ್ನು ಪರೀಕ್ಷಿಸಬಹುದು. ಆಗ ನಿಜವಾಗಿಯೂ 'ಸತ್ಯವು ಕಲ್ಪನೆಯನ್ನು ಮೀರಿಸುವುದು' ಎಂಬುದರ ಮನವರಿಕೆಯಾಗದಿರಲಾರದು.

ಕಾಲೇಜಿನಲ್ಲಿ ಓದುತ್ತಿದ್ದ ಒಂದೇ ಊರಿನ ನಾವೈದು ಜನ ಮಿತ್ರರು ಯಾವುದೋ ಒಂದು ರಜೆಯಲ್ಲಿ ಊರಿಗೆ ಹಿಂದಿರುಗುತ್ತಿದ್ದೆವು. ನಾವು ಕುಳಿತ ಡಬ್ಬಿಯಲ್ಲಿ ನಾವೈವರಲ್ಲದೆ ಬೇರೊಬ್ಬ ಮುದುಕನೂ ಇದ್ದನು. ಆ ಮುದುಕನಿಗೆ ಅದೇಕೆ ನಮಗೆ ಆ ಕತೆ ಹೇಳಬೇಕೆಂದು ತೋರಿತೋ ತಿಳಿಯದು. ಕೆಲವು ದಿನಗಳ ಹಿಂದೆ ನಡೆದೊಂದು ಕೊಲೆಯ ವಿಷಯ ನಾವು ಮಾತಾಡುತ್ತಿದ್ದೆವು. ಅಷ್ಟು ಹೊತ್ತೂ ಸುಮ್ಮನಿದ್ದ ಆ ಮುದುಕ ತಾನಾಗಿಯೇ 'ನಾನೊಂದು ಕತೆ ಹೇಳಲೆ?' ಎಂದು ಕೇಳಿದ. ಮುದುಕ ಯೋಗ್ಯನಂತೆ ಬೇರೆ ತೋರುತ್ತಾನೆ. ನಿಷ್ಠುರವಾಗಿ 'ನಿನ್ನ ಕತೆ ಕೇಳುವ ಇಚ್ಛೆ ನಮಗಿಲ್ಲ' ಎಂದುಬಿಡುವುದು ಹೇಗೆ? ಇಷ್ಟವಿಲ್ಲದಿದ್ದರೂ ಸಮ್ಮತಿ ಸೂಚಿಸಿದೆವು.

೩೦ ಬ ಸಿ

ಮುದುಕ ಹೆಚ್ಚಿನ ಮುನ್ನುಡಿಯಾವುದನ್ನೂ ಬೆಳೆಯಿಸದೆ ಹೇಳಲು ತೊಡಗಿದ:

“ಇದು ಮೂವತ್ತು ವರ್ಷಗಳ ಹಿಂದಿನ ಮಾತು. ನಾನೀಗ ಯಾರ ವಿಷಯವಾಗಿ ಹೇಳಬೇಕೆಂದಿರುವೆನೋ ಅವನಾಗ ಇಪ್ಪತ್ತೈದು ವರ್ಷ ಪ್ರಾಯದ ಹೃಷ್ಟಪುಷ್ಟನಾದ ಯುವಕನಾಗಿದ್ದನು. ಬಲು ಚಿಕ್ಕ ಪ್ರಾಯದಲ್ಲೇ ತಂದೆತಾಯಿಗಳನ್ನು ಕಳೆದುಕೊಂಡು, ಬೇರೆಯವರ ಮನೆಯಲ್ಲಿ ಬೆಳೆದಿದ್ದ. ಎಷ್ಟಾದರೂ ಬೇರೆಯವರು. ಹೊಟ್ಟೆಬಟ್ಟೆಗೆ ಕೊಡುವುದೇ ಅವರಿಗೆ ಕಷ್ಟ. ಇನ್ನು ವಿದ್ಯೆಗೆಲ್ಲಿಂದ ಬರಬೇಕು ಹಣ! ಏನೋ ಅವನನ್ನು ಸಾಕಿದವನ ಹೆಂಡತಿ ಒಳ್ಳೆಯವಳು. ಅವಳ ದಯೆಯಿಂದ ಆತ ಸ್ವಲ್ಪ ಓದುಬರಹಗಳನ್ನು ಕಲಿತ; ಅಷ್ಟೇ ಅವನ ವಿದ್ಯಾಭ್ಯಾಸ. ಎಂಟು ಹತ್ತು ವರ್ಷ ವಯಸ್ಸಾದಂದಿನಿಂದ ಅವನಿಗೆ ಆ ಮನೆಯವರ ಕೆಲಸ ಸುರುವಾಯ್ತು. ಮೊದಮೊದಲು ಕರುಗಳನ್ನು ಕಾಯುತ್ತಿದ್ದ. ದೊಡ್ಡವನಾಗುತ್ತ ಬಂದಂತೆ ಕೆಲಸಗಳೂ ಹೆಚ್ಚು ಹೆಚ್ಚಾಯ್ತು. ಆದರವನಿಗೆ ಕೆಲಸವೆಂದರೆ ಬೇಸರವಿಲ್ಲ. ಬೆಳಗಿನಿಂದ ರಾತ್ರಿಯವರೆಗೂ ದುಡಿಯುತ್ತಿದ್ದ. ಅವನಂಥ ನಂಬಿಕೆಯ ಕಷ್ಟಗಾರನಾದ ಆಳು ಮತ್ತೆಲ್ಲಿ ದೊರೆಯಬೇಕು!—ಅದೂ ಸಂಬಳವಿಲ್ಲದೆ!! ಮನೆಯವರಿಗೂ ಅವನೆಂದರೆ ವಿಶ್ವಾಸ-ಆದರ!

“ಹೀಗೆ ದಿನಗಳೊಂದೊಂದಾಗಿ, ವರ್ಷಗಳು ಕಳೆದುವು. ಅವನೂ ಬೆಳೆಯುತ್ತ ಬಂದ. ಕಷ್ಟದಿಂದ ಬೆಳೆದ ಆರು ಅಡಿ ಎತ್ತರದ ಗಟ್ಟಿಮುಟ್ಟು ಶರೀರ, ಆರೋಗ್ಯದಿಂದ ತುಂಬಿದ ಗಂಭೀರವಾದ ಮುಖ, ಚಟುವಟಿಕೆಯಿಂದ ತುಂಬಿ ಮಿಂಚುತ್ತಿದ್ದ ಕಣ್ಣುಗಳು ಇವೆಲ್ಲಾ ಸೇರಿ, ಆ ಮನೆಯವರ ಹೊಲ ಗದ್ದೆಗಳಲ್ಲಿ ಕೆಲಸ ಮಾಡುವ ನೂರಾರು ಆಳುಗಳ ಮಧ್ಯದಲ್ಲಿದ್ದರೂ ಅವನನ್ನು ಎತ್ತಿ ಬೇರೆಯಾಗಿ ತೋರಿಸುತ್ತಿದ್ದುವು.

“ಹೊಲದಲ್ಲಿ ಕೆಲಸ ಮಾಡುತ್ತಿದ್ದರೂ ಅವನಿರುವುದು ಮೊದಲಿನಂತೆ ಅವರ ಮನೆಯಲ್ಲೇ. ಊಟ, ತಿಂಡಿ ಎಲ್ಲಾ ಅವರಿಗಾದಂತೆ ಇವನಿಗೂ ದೊರೆಯುತ್ತಿತ್ತು. ಹೊಲದಲ್ಲಿ ಕೆಲಸ ತೀರಿಸಿ, ದನಗಳನ್ನು ಹಟ್ಟಿಗೆ

ಕೂಡಿಸಿ, ಹಾಲು ಕರೆದು, ಕರುಗಳನ್ನು ಬೇರೆಯಾಗಿ ಕಟ್ಟಿ, ಹುಲ್ಲುಹಾಕಿ ಮನೆಗೆ ಬರುವಾಗ ದೀಪಹತ್ತಿಸುವ ಸಮಯವಾಗುತ್ತಿತ್ತು. ಆ ಕೆಲಸವೂ ಅವನಿಗೇ. ದೀಪ ಹತ್ತಿಸಿ ಆಯಿತು ಎಂದರೆ ಮನೆಯ ಚಿಕ್ಕಮಕ್ಕಳ ಕೈಕಾಲು ತೊಳೆಯಿಸಬೇಕು; ಇದು ಅವನ ದಿನಚರಿಯ ಕೆಲಸಗಳಲ್ಲಿ ಕೊನೆಯದು. ಇಷ್ಟಾಗುವಾಗ ಏಳುವರೆ ಗಂಟೆಯಾಗುತ್ತಿತ್ತು. ಕೈಕಾಲು ತೊಳೆಯಿಸಿಕೊಂಡು ಮಕ್ಕಳು ಓದುವುದಕ್ಕೆ ಕುಳಿತರೆಂದರೆ ಇವನೂ ಹೋಗಿ ಒಂದು ಮೂಲೆಯಲ್ಲಿ ಕುಳಿತು, ಆ ಮಕ್ಕಳ ಪುಸ್ತಕಗಳನ್ನು ತಿರುವಿಹಾಕುತ್ತಿದ್ದ. ಅದರಿಂದಲೇ ಚಿಕ್ಕಂದಿನಲ್ಲಿ ಕಲಿತ ಸ್ವಲ್ಪ ಓದುಬರಹ ಮರೆತಿರಲಿಲ್ಲ.

"ಒಂಬತ್ತು ಗಂಟೆಗೆ ಅವನಿಗೆ ಊಟ ಸಿಕ್ಕುತ್ತಿತ್ತು. ಆಗ ಊಟ ಮಾಡಿ ಮಲಗಿದರೆ ಪುನಃ ಬೆಳಗಿನ ನಾಲ್ಕು ಗಂಟೆಗೆ ಎದ್ದು ಕೆಲಸಕ್ಕೆ ಪ್ರಾರಂಭ.

"ಒಂದು ದಿನದಿಂದ ಇನ್ನೊಂದು ದಿನಕ್ಕೆ ವ್ಯತ್ಯಾಸವಿಲ್ಲದಂತೆ ಇದೇ ತರದ ಕಾರ್ಯಕ್ರಮ ಅವನ ಜೀವನದಲ್ಲಿ. ಆಗ ತನಗೀತರದ ಜೀವನದಲ್ಲಿ ತೃಪ್ತಿಯೋ, ಅತೃಪ್ತಿಯೋ ಎಂದು ಯೋಚಿಸಲು ಸಹ ಸಮಯವಿರಲಿಲ್ಲ. ಇದ್ದರೂ ಆ ತರದ ಯೋಚನೆ ಎಂದೂ ಅವನಲ್ಲಿ ಉಂಟಾಗಿರಲಿಲ್ಲ. ಅವನ ಈ ತರದ ಜೀವನದಲ್ಲಿ ಸ್ವಲ್ಪ ಸ್ವಲ್ಪವಾಗಿ ಬಹುಶಃ ಅವನಿಗೆ ತಿಳಿಯದಂತೆಯೇ ಪರಿವರ್ತನವಾಗತೊಡಗಿದಾಗ ಅವನಿಗೆ ೨೪ ವರ್ಷದ ವಯಸ್ಸು ನಡೆಯುತ್ತಿತ್ತು.

"ಆ ವರ್ಷ ಅವರ ಗದ್ದೆಯ ಕೆಲಸ ಬೇಗ ತೀರಿಹೋಗಿತ್ತು. ಅದರಿಂದ ಅವನಿಗೆ ಹಿಂದೆ ಎಂದೂ ದೊರೆಯದಷ್ಟು ವಿರಾಮ. ಮತ್ತೆ ಅದೇ ವರ್ಷ ಆ ಮನೆಯವರ ಹಳೆಯ ಮೇಸ್ತ್ರಿಯೂ ಸತ್ತುಹೋದುದರಿಂದ ಅವನಿಗೇ ಆ ಕೆಲಸವೂ ದೊರೆಯಿತು. ಈಗವನಿಗೆ ಬೇರೆಯವರಿಂದ ಕೆಲಸ ಮಾಡಿಸುವುದಲ್ಲದೆ ತಾನೇ ಮಾಡಬೇಕಾಗಿರಲಿಲ್ಲ. ಇದರ ಜೊತೆಗೆ ಹಿಂದಿನ ಮೇಸ್ತ್ರಿಗಿದ್ದಷ್ಟಲ್ಲದಿದ್ದರೂ ಸ್ವಲ್ಪ ಸಂಬಳ ಬೇರೆ ಸಿಕ್ಕತೊಡಗಿತು.

"ಜೀವನದಲ್ಲಿ ಎಂದೂ ತನ್ನದೆಂಬ ಒಂದು ಬಿಡಿ ಕಾಸೂ ಇಲ್ಲದಿದ್ದ ಅವನಿಗೆ, ಅಷ್ಟರಿಂದಲೇ ತೃಪ್ತಿ–ಆನಂದ.

"ಮೊದಲೇ ಹೇಳಿದೆನಲ್ಲ-ಆ ವರ್ಷ ಅವನ ಕೆಲಸ ಬೇಗ ತೀರಿತ್ತೆಂದು. ತಮ್ಮ ಕೆಲಸ ತೀರಿದ ಮೇಲೆ ನೆರೆಹೊರೆಯವರ ಗದ್ದೆಗಳಿಗೆ ಹೋಗಿ ಸಹಾಯಮಾಡುವುದು ಹಳ್ಳಿಯ ಕಡೆಗೆ ವಾಡಿಕೆ. ಈಗವನು ಮೇಸ್ತ್ರಿಯಾದರೂ ಪದ್ಧತಿಯಂತೆ ಬೇರೆಯವರ ಗದ್ದೆಗಳಿಗೆ ಹೋಗಿ ಸಹಾಯ ಮಾಡುವ ರೂಢಿಯನ್ನು ತಪ್ಪಿಸಲಿಲ್ಲ. ಯಾವಾಗಲೂ ನಾಲ್ಕಾರು ಆಳುಗಳೊಡನೆ ನೆರೆಯವರ ಗದ್ದೆಗೆ ಹೋಗುತ್ತಿದ್ದ.

"ಜೋರಾಗಿ ಮಳೆ ಸುರಿಯುತ್ತಿದ್ದರೂ ನಡುಕವನ್ನು ಹುಟ್ಟಿಸುವ ಚಳಿ ಇದ್ದರೂ ತುಂಬ ಜನರೊಂದಾಗಿ ಗದ್ದೆಗಳಲ್ಲಿ ಕೆಲಸಮಾಡಲು ಒಂದು ತರದ ಉತ್ಸಾಹವಿದೆ. ಪದಗಳನ್ನು ಹಾಡಿಕೊಳ್ಳುತ್ತ, ಹರಟೆ ಕೊಚ್ಚುತ್ತ ಕೆಲಸ ಮಾಡುವಾಗ 'ದಣಿವೆಂದರೇನು?' ಎಂಬುದೇ ಮರೆತು ಹೋಗುತ್ತೆ. ನಾಟಿಕೆಲಸ ಮತ್ತು ಕೊಯ್ಲುಕೆಲಸಗಳ ಸಮಯದಲ್ಲಿ ಗದ್ದೆಗಳಲ್ಲಿ ಕೆಲಸಮಾಡಲು ಬೇಸರವಿಲ್ಲ. ಅವನಂತೂ ಎಂದೂ ಮೈಗಳ್ಳನಾಗಿ ಕೂತವನಲ್ಲ. ಕೆಲಸವೆಂದರೆ ಅವನಿಗೆ ಆಟ; ಅವನೊಡನೆ ಕೆಲಸ ಮಾಡುವುದೆಂದರೆ ಇತರರಿಗೂ ಉತ್ಸಾಹ. ಗದ್ದೆಗಳಲ್ಲಿ ಗಂಡುಸರೂ ಹೆಂಗುಸರೂ ಒಂದುಗೂಡಿ ಕೆಲಸ ಮಾಡುತ್ತಿರುವುದು ವಾಡಿಕೆ. ನಾಟಿ ಸಮಯದಲ್ಲಿ (ಸಸಿಗಳನ್ನು ನೆಡುವಾಗ) ಹೆಂಗುಸರು ಅಗೆ ತೆಗೆದು ಕಂತೆ ಕಟ್ಟುವರು. ಗಂಡುಸರು ಅವರು ತೆಗೆದ ಅಗೆಗಳನ್ನು ನೆಡುವರು. ಯಾರು ಹೆಚ್ಚು ಅಗೆ ತೆಗೆಯುವುದು, ಯಾರು ಹೆಚ್ಚು ನೆಡುವುದು ಎಂದು ಪೈಪೋಟಿ ಬೇರೆ. ನಾಟಿ ನೆಡುವುದರಲ್ಲಿ ಅವನನ್ನು ಮೀರಿಸುವವರಿಲ್ಲ. ಆ ದಿನ ಅವನು ನೆಡುವಷ್ಟು ಚುರುಕಾಗಿ ಅವನಿಗೆ ಅಗೆ ಒದಗಿಸಿದ **ಆ ಅವಳೇ** ಅವನ ಜೀವನವನ್ನು ಸಂಪೂರ್ಣವಾಗಿ ಪರಿವರ್ತನಗೊಳಿಸಿದಾಕೆ. ಜಾತಿಯಿಂದವಳು ಮುಸಲ್ಮಾನರವಳು.

"ಪ್ರೇಮಕ್ಕೆ ಜಾತಿ ಕುಲಗಳನ್ನು ಕಟ್ಟಿಕೊಂಡು ಮಾಡಬೇಕಾದುದೇನು? ಅದು ಕುರುಡು. ಅದರಲ್ಲೂ ನಿಜವಾದ ಪ್ರೇಮವಾದರೆ ಅದರ ಹಾದಿ ಎಂದೆಂದಿಗೂ ನಿಷ್ಕಂಟಕವಲ್ಲ.

"ಮಳೆ ಬಿಸಿಲೆನ್ನದೆ ಸದಾ ದುಡಿತದಿಂದ ಬಣ್ಣ ಸ್ವಲ್ಪ ಕಪ್ಪಾದರೂ ಸೊಗಸಾದ ಮೈಕಟ್ಟು. ತುಂಬಿದ ಅಗಲವಾದ ಮುಖ. ಆ ಮುಖದಲ್ಲಿ ಹರಿಯುವ ನಗು. ನಗುವಿನಿಂದರಳಿದ ಕಣ್ಣುಗಳು, ಮತ್ತೆ ಆ ಕೆಲಸದಲ್ಲಿಯ ಉತ್ಸಾಹ–ಇದೆಲ್ಲವನ್ನೂ ನೋಡಿದವರು, 'ಯಾವ ಜಾತಿಯಲ್ಲಾದರೂ ಲತೀಫಾಳಂಥ ಹುಡುಗಿಯರು ಬಲು ಕಮ್ಮಿ' ಎಂದು ಒಪ್ಪಿಕೊಳ್ಳಬೇಕಾಗುವಂತಿದ್ದಳು....ಅವನ ಮನಸ್ಸನ್ನು ಕದ್ದ ಆ ಮುಸಲ್ಮಾನರ ಹುಡುಗಿ ಲತೀಫಾ.

"ಅದೇ ಅವರ ಮೊಟ್ಟಮೊದಲಿನ ಪರಿಚಯ. ಇಲ್ಲಿ ಇಷ್ಟು ಹೇಳಿದರೆ ಸಾಕು. ಅವರ ಪ್ರಣಯವು ಹೇಗೆ ಮುಂದುವರಿಯಿತು ಎನ್ನುವ ಆವಶ್ಯಕತೆಯಿಲ್ಲ.

"ಅವನಿಗೆ ತನ್ನವರೆಂಬುವರು ಯಾರೂ ಇಲ್ಲ. ಅವಳಿಗೆ ತಾಯಿ ಇದ್ದರೂ ಅವಳು ಇನ್ನೊಬ್ಬನನ್ನು ಮದುವೆಯಾಗಿದ್ದಳು. ಆ ಮದುವೆಯಿಂದ ಮಕ್ಕಳೂ ಇದ್ದರು. ಚಿಕ್ಕಪ್ಪನ ಮನೆಯಲ್ಲಿ ಇವಳ ಜೀವನವೇನೂ ಸುಖಮಯವಲ್ಲ. ಮತ್ತೆ ನೆರೆಹೊರೆಯ ಹೊಲಗದ್ದೆಗಳಲ್ಲಿ ಕೆಲಸ ಮಾಡುವವರಿಗೆ ಒಬ್ಬರನ್ನೊಬ್ಬರು ನೋಡುವುದೂ ಕಷ್ಟವಾದ ಮಾತಲ್ಲ. ಅಂತೂ ಆರೇಳು ತಿಂಗಳುಗಳಾಗುವಾಗ ಅವನು ಅವಳಿಗಾಗಿ ತನ್ನ ಜಾತಿಯನ್ನು ಬಿಡಲು ಸಹ ತಯಾರಾಗಿದ್ದ. ಅವಳು! ಅವನಿಗಾಗಿ ತನ್ನ ಜೀವನವನ್ನೇ ಧಾರೆ ಎರೆಯಲು ಸಿದ್ಧಳಾಗಿದ್ದಳು.

"ಆದರೆ ಈ ಲೋಕದಲ್ಲಿ ಈ ತೆರನ ಪ್ರೇಮಕ್ಕೆ ಎಡೆ ಎಲ್ಲಿ? ಅವಳ ಚಿಕ್ಕಪ್ಪ ಒಂದು ದಿನ ಇವರಿಬ್ಬರು ಮಾತನಾಡುತ್ತಿರುವುದನ್ನು ನೋಡಿದ; ಅಂದೇ ಅವನಿಗೆ ಸಂಶಯವಾಯ್ತು. ಬೇಗ ಲತೀಫಾಳ ಮದುವೆ ಮಾಡಿಬಿಡಬೇಕೆಂದು ಆಗಲೇ ನಿಶ್ಚಯಿಸಿದ. ಅವಳಂತಹ ಹುಡುಗಿಯರನ್ನು ಮದುವೆಯಾಗಲು ಯಾರು ತಾನೆ ಒಪ್ಪರು? ತನ್ನ ಹೆಂಡತಿಯನ್ನು ಒಂದು ತಿಂಗಳ ಹಿಂದೆ ಕಳೆದುಕೊಂಡ–ಮಕ್ಕಳೊಂದಿಗನಾದ ನೆರೆಮನೆಯ ಮುಸಲ್ಮಾನನೊಬ್ಬನು ತಯಾರಾಗಿಯೇ ಇದ್ದ. ಲತೀಫಾಳ ಚಿಕ್ಕಪ್ಪ ಅವನಿಂದ ನೂರು ರೂಪಾಯಿಗಳನ್ನು ಪಡೆದುಕೊಂಡು, ಅವನಿಗವಳನ್ನು

೧೦ ಬಸಿ

ಕೊಡಲೊಪ್ಪಿದ. ಈ ಸಂಬಂಧದಲ್ಲಿ ಲತೀಫಳ ಇಷ್ಟಾನಿಷ್ಟಗಳನ್ನು ಕೇಳು ವಂತಿರಲಿಲ್ಲ. ಅವಳಿಗೂ ಅದು ಚೆನ್ನಾಗಿ ಗೊತ್ತಿತ್ತು. ಅವನ ಹತ್ತಿರ ಹೋಗಿ ಹೇಳುವುದೊಂದೇ ಅವಳಿಗೆ ತೋರಿದ ಉಪಾಯ. ಆದರೆ ಅವಳು ಮನೆಬಿಟ್ಟು ಹೊರಗೆ ಹೋಗದಂತೆ ಎಚ್ಚರವಾಗಿದ್ದ ಅವಳ ಚಿಕ್ಕಪ್ಪ.

"ಆ ದಿನ ಅವನು ಎಂದಿನಂತೆ ಅವಳನ್ನು ಕಾದ. ಗಂಟೆ ಏಳಾದರೂ ಅವಳ ಸುಳಿವಿಲ್ಲ. ಅವಳನ್ನು ನೋಡದೆ ಅವನಿಗೆ ಸಮಾಧಾನವಿಲ್ಲದಿದ್ದರೂ, ಕತ್ತಲಾಗುತ್ತ ಬಂದುದರಿಂದ ಯಜಮಾನನ ಮನೆಗೆ ಹೋಗಿ ದೀಪ ಹತ್ತಿ ಸದೆ ಉಪಾಯವಿರಲಿಲ್ಲ. ಮನಸ್ಸನ್ನು ಅವಳೆಡೆಗೆ ಕಳುಹಿಸಿ ಅವನು ಮನೆಗೆ ಬಂದ.

"ಮರುದಿನ ಎಂದಿಗಿಂತಲೂ ಒಂದು ಗಂಟೆ ಮೊದಲೇ ಎದ್ದ. ಬೆಳಗಿನ ಕೆಲಸಗಳನ್ನೆಲ್ಲಾ ಬೇಗ ಬೇಗ ತೀರಿಸಿ, ಎಲ್ಲರೂ ಕಾಫಿ ಕುಡಿಯುತ್ತಿ ರುವ ಸಮಯ ನೋಡಿ ಅವಳ ಮನೆಗೆ ಹೊರಟ. ಅವಳು ಹಟ್ಟಿಯಲ್ಲಿ ಹಾಲು ಕರೆಯುತ್ತಿದ್ದವಳು, ಇವನು ದೂರದಲ್ಲಿ ಬರುವುತ್ತಿರುವುದನ್ನು ನೋಡಿ, ಹಾಲಿನ ತಂಬಿಗೆಯನ್ನು ಅಲ್ಲೇ ಇಟ್ಟು ಅವನೆಡೆಗೆ ಓಡುತ್ತ ಹೋದಳು.

"ಅವಳು ತನ್ನ ದುಃಖವನ್ನೆಲ್ಲಾ ತೋಡಿಕೊಳ್ಳುತ್ತಿರುವಾಗ ಅವನು ದಿಕ್ಕುತೋರದೆ ನಿಶ್ಚಲನಾಗಿ ನಿಂತಿದ್ದ. ಅವಳಂತೂ ಒಂದೇಸವನೆ 'ನಿನ್ನನ್ನು ಬಿಟ್ಟು ನಾನು ಇರಲಾರೆ; ನಿನ್ನ ಕೈಯಿಂದಲೇ ನನ್ನನ್ನು ಕೊಂದುಬಿಡು' ಎಂದು ಅಳುತ್ತಿದ್ದಳು. ಆಗವನಿಗೆ ಬುದ್ಧಿ ಇತ್ತೋ ಇಲ್ಲವೋ ಎಂದು ನಾನೀಗ ಹೇಳಲಾರೆ. ಆದರೆ ಅವನಂತೆ ನಾನವಳನ್ನು ಪ್ರೀತಿಸಿ, ಅವಳನ್ನು ಇನ್ನೊಬ್ಬನ ಪಾಲಿಗೆ ಒಪ್ಪಿಸುವ ಪ್ರಸಂಗ ಬಂದಿ ದ್ದರೆ ನಾನೂ ಅವನು ಮಾಡಿದಂತೆಯೇ ಮಾಡುತ್ತಿದ್ದೆನೇನೋ ನಿಜ. ಆಗವನಿಗೆ ಹಿತಾಹಿತಗಳನ್ನು ವಿವೇಚಿಸುವ ಶಕ್ತಿಯಿರಲಿಲ್ಲ. ಅವಳನ್ನು ಕರೆದುಕೊಂಡು ಎಲ್ಲಾದರೂ ಹೊರಟುಹೋಗಬಹುದಿತ್ತು. ಆದರೆ ಆ ತರದ ಯೋಚನೆಗೆ ಎಡೆಕೊಡತಕ್ಕ ಮನುಷ್ಯನಾಗಿರಲಿಲ್ಲ ಅವನು. ಅವ ಳನ್ನು ಮದುವೆಯಾಗದೆ ಕಳ್ಳನಂತೆ ಕರೆದುಕೊಂಡು ಹೋಗುವುದು

ಅವನಿಗೆ ಒಪ್ಪಿಗೆ ಇಲ್ಲ. ಮತ್ತೆ ಆ ಸಮಯದಲ್ಲಿ ಅಷ್ಟೊಂದು ಯೋಚಿಸುವಂತೆಯೂ ಇರಲಿಲ್ಲ ಅವನ ಮನಸ್ಸು!

"ಏನು ತೋರಿತೋ! ತನ್ನ ಕಾಲುಗಳನ್ನು ಹಿಡಿದುಕೊಂಡು 'ನನ್ನನ್ನು ಕೊಂದುಬಿಡು' ಎನ್ನುತ್ತಿದ್ದ ಅವಳನ್ನು ಹಿಡಿದೆತ್ತಿ–ಕಣ್ಣೀರಿನಿಂದ ತೋಯ್ದು ಮುಖವನ್ನು ಒರಸಿ, ಅವಳ ಅಗಲವಾದ ಹಣೆಗೆ ಭಕ್ತಿಯಿಂದ ಮುತ್ತಿಟ್ಟು 'ಅಳಬೇಡ ಲತೀ, ನಾವಿಬ್ಬರೂ ಜೊತೆಯಾಗಿ ಹೋಗೋಣ. ನನ್ನೊಡನೆ ಬರಲು ನಿನಗೆ ಬೇಸರವಿಲ್ಲ ತಾನೆ?' ಎಂದು ಕೇಳಿದ.

"ತಿರುಗಿ ಅವಳವನ ಕಾಲುಗಳನ್ನು ಹಿಡಿದು—'ಅಪನ ಕೈ ಹಿಡಿದು ಬಾಳುವುದಕ್ಕಿಂತ ನಿನ್ನ ಕೈಯಿಂದ ನನಗೆ ಸಾವೇ ಹಿತ. ನನ್ನನ್ನು ಕೊಂದುಬಿಡು' ಎಂದಳು.

"ಪುನಃ ಅವಳನ್ನು ಹಿಡಿದೆತ್ತಿ, ಅವಳ ಮುಖವನ್ನು ಎರಡು ಕೈಗಳಿಂದಲೂ ಹಿಡಿದು, ಅವಳ ಶಾಂತ–ಗಂಭೀರ ನಯನಗಳಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದ. ಮತ್ತೆ–'ತಯಾರಾದೆಯಾ ಲತೀ?' ಎಂದ. ಅರೆಗಳಿಗೆಯ ಹಿಂದೆ ಅಳುವಿನಿಂದ ಕಳೆಗುಂದಿದ್ದ ಮುಖ ನಗುವಿನಿಂದ ಅರಳಿತು. ಅವನನ್ನೆ ತದೇಕದೃಷ್ಟಿಯಿಂದ ನೋಡುತ್ತ 'ಹೂಂ' ಎಂದುವು ಅವಳ ಕಣ್ಣುಗಳು. ಅವಳ ಕಣ್ಣುಗಳಲ್ಲಿ ಆ ಮೂಕ ಅನುಮತಿಯನ್ನು ಓದಿ ಆತ ತಡೆಯಲಾರದೆ ಹೋದ; ಹತ್ತಿರ ಸೆಳೆದು ಅವಳ ಮುಖವನ್ನು ತನ್ನೆದೆಯಲ್ಲಿ ಅವಿಸಿಕೊಂಡ. ಮತ್ತೆ ಒಂದೇ ಒಂದು ಕ್ಷಣದಲ್ಲಿ ಅವನ ಸೆಳೆತವು ಸಡಿಲಾದಾಗ ಅವಳು ಶವವಾಗಿದ್ದಳು. ಅವಳ ಬೆನ್ನಿನಿಂದಾಗಿ ಎದೆಯಲ್ಲಿ ಹೊರಟ ಅವನ ಚೂರಿ ಅವಳ ಶರೀರದಲ್ಲಿತ್ತು. ಒಂದರೆಕ್ಷಣದ ಮೊದಲು ಅರಳಿ ಅವಳ ಮುಖವನ್ನು ಬೆಳಗಿಸಿದ್ದ ನಗುವೂ, ಆ ಕಣ್ಣುಗಳ ಶಾಂತ ನೋಟವೂ ಹಾಗೆಯೇ ಇದ್ದುವು.

"ಆದರವನಿಗದೊಂದೂ ಕಾಣದು. ರಕ್ತದ ಮಡುವಿನಲ್ಲಿ ಬಿದ್ದಿದ್ದ ಶರೀರ ಅವನಿಗೆ ಕಾಣಿಸಲಿಲ್ಲ. ಜಾತಿಬಂಧನದ ಆಚೆ ನಿಂತು

ಮುಗುಳುನಗು ನಗುತ್ತ ತನ್ನನ್ನೇ ಕೂಗುತ್ತಿದ್ದ ಅವಳೆಡೆಗೆ ಸೇರಲು ಹತ್ತಿರದಲ್ಲೇ ಇದ್ದ ಬಾವಿಗೆ ಹಾರಿದ.

“ಬಾವಿಗೆ ಹಾರಿದ–ಸತ್ತು ಅವಳೆಡೆಯನ್ನು ಸೇರುವ ಸಲುವಾಗಿ; ಆದರೆ ಅವನು ಸಾಯಲಿಲ್ಲ–ಸಾಯಲಿಲ್ಲ....”

ಮುದುಕ ಇಷ್ಟು ಹೇಳಿ ಸ್ವಲ್ಪ ಹೊತ್ತು ಸುಮ್ಮನಾದ. ಕತೆ ಕೇಳುವ ಮೊದಲು ಏನೋ ಎಂತಿದ್ದ ನಾವು, ಕೇಳಿ ಈಗ ಅಳುವಂತಾಗಿ ಹೋಗಿದ್ದೆವು. ನಮ್ಮ ಕಣ್ಣೀರು ನೋಡಿ ಮುದುಕನೇನೆಂದುಕೊಳ್ಳುವನೋ ಎಂದು ಮುಖ ಮರೆಮಾಡಿ ಕಣ್ಣೊರಸಿಕೊಂಡೆವು. ಆದರೆ ಮುದುಕ ನಮ್ಮ ಕಡೆ ನೋಡುತ್ತಿರಲಿಲ್ಲ. ಶೂನ್ಯವನ್ನು ನಿಟ್ಟಿಸುತ್ತಿದ್ದ. ಅವನ ಕಣ್ಣುಗಳಲ್ಲಿ ವೇದನೆಯು ತುಂಬಿತ್ತು. ಬಹುಶಃ ಕತೆಯ '**ಅವನು**' ಮುದುಕನ ಸಂಬಂಧಿಯೋ ಏನೋ ಎನ್ನಿಸಿತು–ನಮಗವನ ಮುಖ ನೋಡಿ. '**ಅವನ**' ಅವಸ್ಥೆ ಏನಾಯಿತು?–ಎಂದು ನಮಗೆಲ್ಲಾ ಕುತೂಹಲವಿದ್ದರೂ ಮುದುಕ ತಾನಾಗಿ ಪುನಃ ಪ್ರಾರಂಭಿಸುವ ತನಕ ಸುಮ್ಮನಿದ್ದೆವು.

ತಾನಾಗಿಯೆ ಮುದುಕ ಸ್ವಲ್ಪ ಹೊತ್ತಿನ ತರುವಾಯ ಮುಂದುವರಿಸಿದ:—

“ಅವಳ ಚಿಕ್ಕಪ್ಪ 'ಅವಳೇಕೆ ಇನ್ನೂ ಬಂದಿಲ್ಲ' ಎಂದು ನೋಡಲು ಬಂದವನು ಅವನು ಬಾವಿಗೆ ಹಾರುವುದನ್ನು ನೋಡಿ ಎತ್ತಿ ಹಾಕಿದ. ಕ್ರಮಪ್ರಕಾರವಾಗಿ ಕೋರ್ಟಿನಲ್ಲಿ ವ್ಯಾಜ್ಯವೂ ಆಯಿತು. ಆದರೆ ಅದೊಂದೂ ಅವನಿಗೆ ತಿಳಿಯದು. ಅವನಿಗೆ ಹುಚ್ಚೆಂದು ಜನರು ಹೇಳುತ್ತಿದ್ದರು. ಹುಚ್ಚೆಂದೇ ಅವನಿಗೆ ಫಾಸಿಯಾಗಲಿಲ್ಲ. ಆಗಿದ್ದರೆ ಒಳ್ಳೆಯದಾಗುತ್ತಿತ್ತು. ಬಾವಿಯಲ್ಲಿ ಬಿದ್ದು ಅವಳ ಹತ್ತಿರ ಹೋಗಲಾಗದಿದ್ದರೆ ಫಾಸಿಯಾದರೂ ಅವಳ ಹತ್ತಿರ ಒಯ್ಯಬಹುದೆಂದು ಅವನೆಣಿಸಿದ್ದ; ಪಾಪಿ! ಅಷ್ಟೊಂದು ಭಾಗ್ಯವು ಅವನಿಗೆಲ್ಲಿ!!

“ಹುಚ್ಚನಲ್ಲದಿದ್ದರೂ ಹುಚ್ಚನೆನ್ನಿಸಿಕೊಂಡು ೩೦ ವರ್ಷ ಹುಚ್ಚರ ಆಸ್ಪತ್ರೆಯಲ್ಲಿ ಕಳೆದ. '೩೦ ವರ್ಷ ಹೇಗೆ ಕಳೆದ?' ಎಂದು ಕೇಳಬೇಡಿ.

ಹೇಗೆ ಕಳೆದ ಎಂದು ಹೇಳಬೇಕಾದರೆ ಹುಚ್ಚಿಲ್ಲದವರಿಗೂ ಹುಚ್ಚು ಹಿಡಿ ದೀತು. ಅಂತೂ ಕಳೆದ—ಅವಳ ಹತ್ತಿರ ಹೋಗುವುದೇ ಜೀವನದ ಹಂಬಲ ವಾದರೂ ಹೋಗಲು ದಾರಿ ತೋರದೆ, ಹುಚ್ಚರ ಮಧ್ಯದಲ್ಲಿ ಹುಚ್ಚರಿ ಗಿಂತಲೂ ಹುಚ್ಚನಾಗಿ ಕಳೆದ. ೩೦ ವರ್ಷಗಳ ತರುವಾಯ ಒಂದು ದಿನ ಅವನ ಬಿಡುಗಡೆಯಾಯಿತು. 'ಬಿಡುಗಡೆಯಾಯಿತು; ಇನ್ನೇನು ಹೋಗ ಬಹುದಲ್ಲ' ಎಂದು ನೀವು ಕೇಳಬಹುದು. ಹೌದು ಹೋಗಬಹುದು. ಇದೋ ಹೊರಟೆ—ಹೋಗುತ್ತೇನೆ....'

ಇದೇನು! ಕತೆ ಹೇಳುತ್ತ ಹೇಳುತ್ತ ಇವನಿಗೇ ಹುಚ್ಚು ಹಿಡಿ ಯಿತೇ ಎಂದು ನಾವು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡೆವು. ಮತ್ತೆ ಅವನ ಮುಖವನ್ನು ನೋಡುವುದರೊಳಗೆ, ಅವನು ಮಿಂಚಿನ ವೇಗದಿಂದ ಹೋಗುತ್ತಿದ್ದ ಆ ರೈಲ ಕಿಟಕಿಯಿಂದ ಕೆಳಗೆ ಹಾರಿಬಿಟ್ಟಿದ್ದ.

ದಿಙ್ಮೂಢರಾದ ನಾವು ಸರಪಳಿಯನ್ನೆಳೆದು ರೈಲನ್ನು ನಿಲ್ಲಿಸಿದೆವು.

ಆದರೆ ಈ ಸಾರಿ ೩೦ ವರ್ಷಗಳಿಂದ ದಾರಿ ಕಾಯುತ್ತಿದ್ದ ಲತೀಫಾ ಳೆಡೆಗೆ ಅವನು ಹೋಗಿಯೇ ಬಿಟ್ಟಿದ್ದ.

ನವ್ಹೆಂಬರ ೧೯೩೮

# ಸುಳ್ಳು ಸ್ವಪ್ನ

೨೬—೪—೨೮

ಕಾಲ ಕಳೆಯುವುದೊಂದು ದೊಡ್ಡ ಭಾರ. ಅದನ್ನು ಹೊರುವ ಕಷ್ಟವನ್ನು ಬರೆಯಲಾರೆ. ಮಾತಾಡಲು ಯಾರೂ ಇಲ್ಲ. ಓದಲು ನನಗೆ ಬೇಕಾದ ಪುಸ್ತಕವಿಲ್ಲ. ಇದ್ದರೂ ಹೇಗೆ ತಾನೆ ಓದಲಿ? 'ಅವನ' ಮನೆಯಿಂದ ಬರುವಾಗ ನನ್ನ ಪುಸ್ತಕವನ್ನು ಮರೆತು ಬಂದಿರುವೆನು. ಪುಸ್ತಕವು ಮರೆತು ಹೋಯ್ತು—ಹೋಗಲಿ, ಆದರೆ ಅದಕ್ಕೂ ಹೆಚ್ಚಿನದನ್ನು ತರಲಾರದೆ ಬಂದಿರುವೆನು.

ಶಾಂತೆಯ ಕಾಗದ ಬಂದಿದೆ. ಬೇಕಾದ ಹಾಗೆ ಬರೆದಿರುವಳು. ಆದರದು ನನ್ನ ಉರಿಯುವ ಹೃದಯವನ್ನು ತಂಪುಮಾಡಬಲ್ಲುದೇ? ಮನಸ್ಸಿಗೆ ಸುಖಕೊಡಬಲ್ಲುದೇ? ಯಾರೊಡನೆ ಹೇಳಲಿ....ಹೇಳುವಂತಹ ಮಾತುಗಳಲ್ಲ..ಏನು ಮಾಡಲಿ......

ಜ್ಞಾಪಕಶಕ್ತಿಯನ್ನು ದೇವರು ಮನುಷ್ಯನಿಗೆ ಕೊಡಬಾರದಿತ್ತೆಂದು ತೋರುವುದು. ಎಷ್ಟು ಕ್ರೂರ! ಎಂತಹ ಹಟಮಾರಿ! ತಪ್ಪಿಸಿಕೊಳ್ಳಲು ನನ್ನ ಪ್ರಯತ್ನವೆಲ್ಲವೂ ನಿಷ್ಫಲ. ಯಾವ ರೀತಿಯಿಂದಲೂ ಜ್ಞಾಪಕವು ಬಂಧಿಸಿರುವ ಬಲೆಯಿಂದ ಬಿಡಿಸಿಕೊಳ್ಳಲಾಗುವುದಿಲ್ಲ. ನಮ್ಮ ಮನೆಯ ಸುತ್ತುಮುತ್ತು ಸೃಷ್ಟಿ ತನ್ನ ಸೌಂದರ್ಯದ ಬೀಡನ್ನು ಕಟ್ಟಿದೆ. ಆದರ ವೈಭವಪೂರ್ಣವಾದ ಸೌಂದರ್ಯವನ್ನು ನೋಡಹೊರಟರೆ ತಾನೆ ಜ್ಞಾಪಕದ ಕ್ರೂರತ್ವವು ತಪ್ಪುವುದೇ? ಇಲ್ಲ—ಸಾಧ್ಯವಿಲ್ಲ. ಇನ್ನಾವುದನ್ನು

ಮೊರೆಹೊಗಲಿ? ಪುಸ್ತಕವನ್ನೆ? ಅದೂ ಆಯಿತು. ಒಣ ಪುಸ್ತಕಕ್ಕೂ ಚಿಗುರು ಜ್ಞಾಪಕಕ್ಕೂ ಎಲ್ಲಿಯ ಸಾಟಿ! ಅಮ್ಮ, ಅಣ್ಣ, ಲಲಿತ ನಾಡಿದ್ದು ಊರಿಗೆ ಹೋಗುವರು. ಮನೆಯಲ್ಲಿ ನಾನು ಮಾತ್ರ. ಜ್ಞಾಪಕದ ಹಬ್ಬ-ನನ್ನನ್ನು ಕುಯಿದು ತಿನ್ನಬಹುದು. ವಿಶ್ವನಿಯಮವೇ ಹೀಗೇನು? ಕಷ್ಟ—ಎತ್ತನೋಡಿದರೂ ಕಷ್ಟ. ಯಾವನಿಗೂ ಸುಖವಿಲ್ಲ. ನನಗೂ ಒಂದು ತರದ ಕಷ್ಟ ಬೇಡವೆ? ಬೇಕು! ಹಾಗಾದರೆ ನಾನೇಕೆ ದುಃಖಿಸಲಿ? ಹೇಳಿದರೆ ಪ್ರಯೋಜನವೇನು? ಸುಮ್ಮನಿರುವುದೇ ಮೇಲೆಂದು ತೋರುವುದು. ಆದರೆ ಸುಮ್ಮನೆಂತಿರಲಿ?

೩—೬—೨೮

ಮನೆಯವರೆಲ್ಲರೂ ಊರಿಗೆ ಹೋಗಿರುವರು. ಮನೆಯಲ್ಲಿ ನಾನೂ ಅಕ್ಕ ಇಬ್ಬರೇ. ಅಕ್ಕನಿಗೆ ಮನೆಗೆಲಸ, ಅದು ಮುಗಿದೊಡನೆ ರಾಮಾಯಣ. ನನಗೆ ಸದಾ ನೆನಪಿನ ಹಬ್ಬ..ಮರೆಯಲು ನೆನೆಸಿದಂತೆಲ್ಲಾ ಹೆಚ್ಚುತ್ತಿರುವ ನೆನಪು..ನಿನ್ನೆ ತಾನೆ ಅವನ ಕಾಗದವು ಬಂದಿದೆ. ಎಂತಹ ಒರಟುಒಕ್ಕಣೆ..ಪಾಪ! ನನ್ನ ಹೃದಯಾಂತರಾಳದಲ್ಲಿ ಉರಿಯುತ್ತಿರುವ ಬೆಂಕಿಯನ್ನು ಅವನು ಹೇಗೆ ತಾನೆ ತಿಳಿಯಬಲ್ಲನು? ಅವನ ಕಾಗದವು ಒರಟಾದರೂ ಆದರಲ್ಲಿ ಸವಿ ಇತ್ತು. 'ತುಟಿಗಳು ಡೊಂಕಾದರೂ ಒಲವಿನ ಮುತ್ತು—ಆ ಮುತ್ತಿನ ನಲಿವು ಡೊಂಕೇ?' ಅವನನ್ನು ಪ್ರೀತಿಸುವ ನನಗೆ ಅವನ ಕಾಗದವು ಒರಟಾದರೂ ಸವಿ ಕಮ್ಮಿಯಾಗುವುದೇ?

ಅವನು ವಾರಕ್ಕೊಮ್ಮೆ ನನಗೆ ಬರೆಯುವನು. ಪ್ರತಿದಿನ, ಪ್ರತಿನಿಮಿಷ ಅವನ ಕಾಗದ ಬಂದರೂ ನನಗೆ ತೃಪ್ತಿಯಿಲ್ಲ. ಇನ್ನು ವಾರಕ್ಕೊಂದು ಬಾರಿ ಬರೆಯುವ ನಾಲ್ಕು ಗೆರೆಗಳಿಂದ ನನ್ನ ಹೃದಯದ ತಾಪವು ಶಾಂತವಾಗುವುದೇ? ಏನನ್ನು ಯೋಚಿಸುತ್ತಿರುವೆ ಎಂದು ಅಕ್ಕ ಕೇಳುತ್ತಾಳೆ. ನಾನೇನೆಂದು ಪ್ರತ್ಯುತ್ತರ ಕೊಡಲಿ? ಸುಳ್ಳು ಹೇಳಲೇ? ಸ್ವಾಭಾವಿಕವಾಗಿ ನಾನು ಸುಳ್ಳು ಹೇಳುವುದು ಅಪರೂಪ.

ಆದರೀಗ ಹೇಳದಿದ್ದರಾಗುವುದೇ? ಅಕ್ಕನಿಗೆ ನಾನೆಂದರೆ ಬಲು ಪ್ರೀತಿ. ನಾನು ಸ್ವಲ್ಪ ಬೇಸರಪಟ್ಟುಕೊಂಡರೆ ಅವಳಿಗೆ ಬಲು ಬೇಸರವಾಗುವುದು. ಅಂತಹ ಪ್ರೀತಿಪಾತ್ರಳಾದ ಅಕ್ಕನನ್ನು ವಂಚಿಸುವುದು ನನಗೇ ನಾಚಿಕೆಯಾಗುವುದು..ಏನು ಮಾಡಲಿ?......

ಕೃಪಾ ನಾಲ್ಕು ಗಂಟೆಗೆ ಬರುವಳಂತೆ. ಬಂದರೆ ಅವನ ಸುದ್ದಿ ಅವಳಿಂದ ತಿಳಿದುಕೊಳ್ಳಬಹುದು. ಆದರೆ ಅವಳೊಡನೆ ಹೇಗೆ ಕೇಳಲಿ? ಕೇಳಿದರೆ ನನ್ನ ಮಾತುಗಳಿಂದ ನನ್ನ ಮನಸ್ಸನ್ನವಳು ಊಹಿಸಿದರೆ! ಇಲ್ಲ—ಕೃಪಾ ಆ ತರದ ಆಲೋಚನೆಗಳಿಗೆ ಎಡೆಕೊಡತಕ್ಕವಳಲ್ಲ—ಅವಳೊಡನೆ ಹೇಗಾದರೂ ಕೇಳಿಯೇ ಬಿಡುವೆನು—ಕೇಳದೆ ಹೇಗೆ ತಾನೆ ಇರಲಿ..ಅಯ್ಯೋ! ನಾಲ್ಕು ಗಂಟೆ ಬೇಗ ಬರಬಾರದೇ? ಪ್ರತಿಯೊಂದು ನಿಮಿಷವೂ ಒಂದೊಂದು ಯುಗವಾಗಿ ಏಕೆ ಬೆಳೆಯುತ್ತಿದೆ......

೪—೬—೨೮

ಕೃಪಾ ಬಂದೂ ಆಯಿತು. ಅವಳೊಡನೆ ಕೇಳಿಯೂ ಆಯಿತು. ನಿನ್ನೆ ರಾತ್ರಿಯೆಲ್ಲ ಅದೇ ಸುದ್ದಿ..ಕೃಪೆಗೆ ಹೇಳಿ ಹೇಳಿ ಬೇಸರಬಂದು ಹೋಗಿದೆ. ನನಗೆ.. ಆದರೆ ನನಗೆ.. ಕೇಳಿದಷ್ಟೂ ತೃಪ್ತಿಯಿಲ್ಲ. ಇನ್ನೊಮ್ಮೆ ಕೇಳಲೇ—ಕೇಳಿದರೆ ಅವಳೇನೆಂದು ತಿಳಿದುಕೊಳ್ಳುವಳು! ಏನಾದರೂ ತಿಳಿದುಕೊಳ್ಳಲಿ—ಕೇಳಿಯೇ ಬಿಡುವೆನು.. ಬೇಡ ..ಕೇಳಲಾರೆ..ಉರಿಯುವ ಹೃದಯವೇ ಸ್ವಲ್ಪ ಸಹಿಸು..ಕೃಪಾ ಕೂಗುತ್ತಿರುವಳು..ಏಕಿರಬಹುದು ..ನನಗೊಂದು ಕಾಗದವಿದೆಯಂತೆ. ಯಾರದಾಗಿರಬಹುದು! ಅವನದೇ? ಅಲ್ಲದೆ ಹೋದರೆ...ನನ್ನ ಆಸೆಗೆ ಎಂತಹ ಆಘಾತ! ಹೌದು—ಅವನದೇ...ಏನೆಂದು ಬರೆದಿರುವನು? ಬರುವನಂತೆ ..ನಾಳೆ ಬರುವನಂತೆ..ಹೃದಯವೇ ಸಂತೋಷದಿಂದ ಬಿರಿಯದಿರು.. ನಾಳೆ! ಎಂದಿಗೆ ನಾಳೆಯಾಗುವುದು! ಈ ದಿನ ಬೇಗನೆ ಏಕೆ ಮುಗಿಯುವದಿಲ್ಲ..ನಿದ್ರೆಗೂ ನನ್ನ ಮೇಲೆ ದಯವಿಲ್ಲವೇಕೆ?......

೬—೬—೨೮

ಎರಡು ದಿನಗಳೆಷ್ಟು ಬೇಗ ಕಳೆದುಹೋದುವು? ಭಾರವಾದ ಸಮಯವು, ಹೊರಲಾರದ ಸಮಯವು ಅವನಿದ್ದ ಎರಡು ದಿನ ಎಷ್ಟು ಬೇಗ ಹಾರಿಹೋಯಿತು? ಆ ಎರಡು ದಿನಗಳು ಮುಗಿಯದೆ ಇರಬಾರ ದಿತ್ತೇ..ಕಳೆದ ಆ ಸುಖಮಯವಾದ ದಿನಗಳು ಇನ್ನು ಮುಂದೆ ಬರು ವವೇ?..ಬರದಿದ್ದರೇನು!..ಆ ನೆನಪು, ಆ ಸವಿಸ್ಮೃತಿಯು ಸದಾ ನನ್ನ ಹೃದಯದಲ್ಲಿ ಜಾಗೃತವಾಗಿಯೇ ಇರುವುದು....

ನಿನ್ನೆ ದಿನವನ್ನು ನೆನಸಿಕೊಂಡರೆ ನನ್ನ ಮನಸ್ಸಿನಲ್ಲಾಗುವ ಭಾವನೆ ಗಳನ್ನು ಬರೆಯಲಾರೆ..ಹೇಗೆ ತಾನೆ ಬರೆಯಲಿ? ಬರೆದು ಪೂರೈಸುವು ದಾದರೂ ಹೇಗೆ? ಬರೆದಂತೆ ಹೆಚ್ಚುವುದು—ದೇವಾ! ಅಂತಹ ದಿನಗಳು ಇನ್ನೂ ಬರುವವೇ?

ನಾನು ಆ ದಿನ ಐದು ಗಂಟೆ ಹೊಡೆಯುವ ಮೊದಲೇ ಹಾಸಿಗೆ ಯನ್ನು ಬಿಟ್ಟು ಎದ್ದಿದ್ದೆ; ಬೆಳಕು ಇನ್ನೂ ಸರಿಯಾಗಿ ಹರಿದಿರಲಿಲ್ಲ. ಎದ್ದು ಮುಖತೊಳೆದುಕೊಂಡು ಬರುವಾಗ ನಾನು ನೆಟ್ಟು, ಪ್ರೀತಿಯಿಂದ ಬೆಳೆಸಿದ ಮಲ್ಲಿಗೆಯ ಗಿಡದಿಂದ ಹೂ ಕುಯಿದು ಬೊಗಸೆಯಲ್ಲಿ ತರು ತ್ತಿದ್ದೆ. ಬರುವಾಗ ಇದಿರಾತ. ಅವನೂ ಎದ್ದು ಮುಖ ತೊಳೆಯುವುದಕ್ಕೆ ಬರುತ್ತಿದ್ದ. ನೋಡಿದೊಡನೆ ನನ್ನ ಮನಸ್ಸಿನಲ್ಲೇನಾಯಿತೋ ಹೇಳ ಲಾರೆ....ಹೇಳಲು ಪ್ರಯತ್ನಿಸಿದಷ್ಟೂ ಹೇಳುವುದು ಅತಿಕಷ್ಟವಾಗಿ ತೋರುತ್ತದೆ .... ನನ್ನ ಆಗಿನ ಮನಸ್ಸಿನ ಭಾವವು ಬರೆವಣಿಗೆಗೆ ಸಿಲುಕುವಂತಹುದಲ್ಲ. ಯಾವಾಗಲೂ ನನಗೆ ಅವನನ್ನು ನೋಡಿದಾಗ ಹಾಗಾಗುವುದು. ಎಷ್ಟೆಷ್ಟು ಮುಚ್ಚಿಡಲು ಪ್ರಯತ್ನಿಸಿದರೂ ನನ್ನ ಕಣ್ಣು ಗಳು ಹೃದಯಾಂತರಾಳದಿಂದ ಆ ಭಾವನೆಗಳನ್ನು ಹೊರಗೆಡಹಿ ಬಿಡು ವವು..ನನ್ನನ್ನು ನೋಡಿ 'ಬೆಳಗಾಗುವ ಮೊದಲೇ ಏಕೆ ಎದ್ದೆ!' ಎಂದು ಕೇಳಿದ—ನನ್ನ ಬಾಯಿಂದ ಮಾತುಗಳು ಹೊರಡಲಿಲ್ಲ. ಕೈಯಲ್ಲಿದ್ದ ಆಗ ತಾನೆ ಕುಯಿದ ಮಲ್ಲಿಗೆಯ ಮೊಗ್ಗೆಗಳನ್ನು ಅವನ ಮುಖಕ್ಕೆರಚಿ ಅಲ್ಲಿಂದ ಓಡಿ ಹೋಗಿಬಿಟ್ಟೆ. ನನ್ನ ವಿಚಿತ್ರ ವ್ಯವಹಾರವನ್ನು ನೋಡಿ ಅವನೇನು

ಕಂ ಬ ನಿ

ಗ್ರಹಿಸಿದನೋ ತಿಳಿಯದು..ಸಾಯಂಕಾಲ ನಾವೆಲ್ಲರೂ ತಿರುಗಾಡುವುದಕ್ಕೆ ಹೊರಟೆವು. ಅಂದಿನ ಸಾಯಂಕಾಲ ಸೃಷ್ಟಿಯು ಸೌಂದರ್ಯದಿಂದ ಮೆರೆದಂತೆ ಇನ್ನಾವಾಗಲೂ ಮೆರೆದಿದ್ದುದನ್ನು ನಾನು ನೋಡಲಿಲ್ಲ. ಬಹುಶಃ ನನ್ನೊಡನೆ ಅವನಿದ್ದುದರಿಂದ ಪ್ರಕೃತಿಯು ಅಂದು ನನ್ನ ಕಣ್ಣುಗಳಿಗೆ ಅಷ್ಟು ಮನೋಹರವಾಗಿ ತೋರಿರಬಹುದು. ಹೀಗೆಂದಿಗೂ ಹೇಳಲಾರೆ..ಆದರೆ ಆ ಸಾಯಂಕಾಲವು ಎಂದೆಂದಿಗೂ ನನ್ನ ಮನಸ್ಸಿನಿಂದ ಮಾಯವಾಗಲಾರದು...ಕೃಪಾ ಮತ್ತು ಅಕ್ಕ ಸ್ವಲ್ಪ ಮುಂದೆ ಹೋಗುತ್ತಿದ್ದರು. ನಾವಿಬ್ಬರೂ ಜೊತೆಯಲ್ಲಿ ಸ್ವಲ್ಪ ಹಿಂದಿನಿಂದ ಹೋಗುತ್ತಿದ್ದೆವು. ಕೃಪೆಯೂ ಅಕ್ಕನೂ ಏನೇನು ಮಾತುಗಳಾಡುತ್ತಿದ್ದರೋ ತಿಳಿಯದು—ಅವರ ಮಾತುಗಳೆಲ್ಲ ಕೇಳುತ್ತಲಿದ್ದರೂ ಮನಸ್ಸೆಲ್ಲವೂ ಬೇರೆ ಕಡೆ ಇದ್ದುದರಿಂದ ಮಾತುಗಳ ಅರ್ಥವಾಗುವ ಸಂಭವವಿರಲಿಲ್ಲ. ಹೋಗುತ್ತಿದ್ದಂತೆಯೇ ಅವನು ನಿಂತ. ನಾನೂ ಅವನೊಡನೆಯೇ ನಿಂತೆ. ಅಕ್ಕನೂ ಕೃಪೆಯೂ ಮುಂದೆ ಹೋಗುತ್ತಿದ್ದವರು ನಾವು ನಿಂತುದನ್ನು ನೋಡಲಿಲ್ಲ. ಮಾತನಾಡುತ್ತ ಇನ್ನೂ ಮುಂದೆ ಹೋದರು. ಎಷ್ಟು ಹೊತ್ತು ನಾವಿಬ್ಬರು ಹಾಗೆ ನಿಂತಿದ್ದೆವೋ ತಿಳಿಯದು. ಕೊನೆಗೆ ಅವನೇ ಮೌನಭಂಗಮಾಡಿ ಕೇಳಿದ. 'ಸರಸ, ಬೆಳಗ್ಗೆ ಹಾಗೇಕೆ ಮಾಡಿದೆ?' ನಾನು ಮಾತನಾಡಲಿಲ್ಲ. 'ಸರಸಿ, ಮಾತೇಕೆ ಆಡುವುದಿಲ್ಲ—ನೀನೇಕೆ ಹಾಗೆ ಮಾಡಿದೆಯೋ ನನಗೆ ಅದು ತಿಳಿಯದು. ಆದರೆ ಅದರಿಂದ ನನ್ನ ಮೇಲಾದ ಪರಿಣಾಮ..ಸರಸ..ನನ್ನ ಸರಸ' ಮುಂದವನ ಬಾಯಿಂದ ಮಾತುಗಳು ಹೊರಡಲಿಲ್ಲ. ನನ್ನನ್ನು ತನ್ನೆಡೆಗೆ ಎಳೆದುಕೊಂಡು ಮುತ್ತಿನ ಮಳೆಯನ್ನು ಸುರಿಸಿಬಿಟ್ಟ. ಎಷ್ಟು ಹೊತ್ತು ಹಾಗೆಯೇ ಕಳೆಯಿತೋ ಹೇಳಲಾರೆ..ದೂರದಿಂದ ಅಕ್ಕನು ಕೂಗುವದು ಕೇಳಿದೊಡನೆ ಅವನು ನನ್ನ ಕೈಬಿಟ್ಟ—ನಾನು ನಿಲ್ಲಲಾರದೆ ಕುಳಿತುಬಿಟ್ಟೆ. ಆಗವನು ಪ್ರೇಮ ಪೂರ್ಣವಾದ ಸ್ವರದಿಂದ ಹೇಳಿದ 'ನನ್ನ ಸರಸಾ, ಕ್ಷಮಿಸು; ಇನ್ನು ಮುಂದೆಂದಿಗೂ ಹೀಗೆ ಮಾಡುವುದಿಲ್ಲ—ಇದೊಂದು ಬಾರಿ ಕ್ಷಮಿಸು.' ಇದಕ್ಕೆ ನಾನು ಉತ್ತರ ಕೊಡುವ ಮೊದಲೇ ಅಕ್ಕ ಬಂದಳು. ಹೆಚ್ಚೇನೂ ಮಾತನಾಡದೆ ನಾವು ಮನೆಗೆ ಬಂದೆವು.

ರಾತ್ರಿ ಊಟವಾಯಿತು. ಕೃಪಾ ಅಡಿಕೆಲೆಯನ್ನು ತಂದಿಟ್ಟುಕೊಂಡು ತಿನ್ನುತ್ತಾ 'ನೀನೇಕೆ ತೆಗೆದುಕೊಳ್ಳುವುದಿಲ್ಲ ಸರಸೀ,' ಎಂದಳು. ನಾನೆರಡು ಎಲೆಗಳಿಗೆ ಸುಣ್ಣಹಾಕಿ ಒಂದನ್ನು ಬಾಯಲ್ಲಿಟ್ಟುಕೊಂಡೆ. ಅಷ್ಟರಲ್ಲಿ ಅವನೂ ಅಲ್ಲಿಗೆ ಒಂದ. ಕೃಪೆಯು ಅಡಕೆಲೆಯ ತಟ್ಟೆಯನ್ನು ಒಳಗಿಡಲು ಹೋದಾಗ ನನ್ನ ಕೈಲಿದ್ದ ಎಲೆಯನ್ನು ನಾನವನ ಕೈಗಿತ್ತೆ. ಆಗವನು ನನ್ನ ಕೈಗಳೆರಡನ್ನೂ ಹಿಡಿದುಕೊಂಡು 'ಕ್ಷಮೆಯ ಗುರುತೇ ಇದು?' ಎಂದು ಕೇಳಿದ. 'ಅಪರಾಧ ಮಾಡಿದರಲ್ಲವೇ ಕ್ಷಮೆ?' ಎಂದು ನಾನಂದೆ. ಅವನು ನನ್ನ ಮಾತು ಕೇಳಿ 'ಸರಸ, ದೇವರು ನಿನ್ನನ್ನು ಕಾಪಾಡಲಿ–ಇದೇ ನನ್ನ ಪ್ರಾರ್ಥನೆ' ಎಂದು ಹೇಳಿ ನನ್ನೆರಡು ಕೈಗಳನ್ನೂ ತನ್ನ ಕಣ್ಣುಗಳಿಗೊತ್ತಿಕೊಂಡು ಹೊರಗೆ ಹೊರಟು ಹೋದ.

ಮರುದಿನ ಬೆಳಗ್ಗೆ ನಾನು ಮುಖ ತೊಳೆಯುವುದಕ್ಕೆ ಹೋದಾಗ ಅವನು ಮಲ್ಲಿಗೆಯ ಮಂಟಪದ ಹತ್ತಿರ ನಿಂತಿದ್ದ. ನನ್ನನ್ನು ನೋಡಿ 'ಹೂ ಕುಯಿದು ಕೊಡಲೇ ಸರಸ' ಎಂದು ಕೇಳಿದ. ನಾನು ಮುಖ ತೊಳೆದುಕೊಳ್ಳುವಾಗ ಅವನು ಹೂವೆಲ್ಲಾ ಕುಯಿದು ಒಂದು ಎಲೆಯ ದೊನ್ನೆಯಲ್ಲಿಟ್ಟು ಮುಖ ತೊಳೆದೊಡನೆ ನನ್ನ ಕೈಗೆ ಕೊಟ್ಟ. . ನಾನೇನು ಹೇಳಬೇಕೆಂದು ತೋರಲಿಲ್ಲ. . . ಅವನ ಮುಖವನ್ನು ನೋಡಿದೆ. . ನಟ್ಟ ದೃಷ್ಟಿಯಿಂದ ನನ್ನನ್ನು ನೋಡುತ್ತಾ 'ಸರಸಿ, ಹತ್ತುಗಂಟೆಗೆ ನಾನು ಹೊರಡುವೆನು. ನಿನ್ನನ್ನು ಬಿಟ್ಟು ಹೇಗಿರಲಿ ಹೇಳು? ಕಾಗದ ಬರೆಯುವಿಯಾ?' ಎಂದು ಕೇಳಿದ. ನನಗೆ ಮಾತನಾಡಲಾಗಲಿಲ್ಲ. ಕಣ್ಣೀರು ತುಂಬಿ ಕಣ್ಣೇ ಕಾಣಿಸಲಿಲ್ಲ. ಆಗವನು ತನ್ನ ಕೈಚೌಕದಿಂದ ನನ್ನ ಕಣ್ಣುಗಳನ್ನೊರಸಿ 'ಅಳಬೇಡ ಸರಸಾ, ನೀನತ್ತರೆ ನನಗೆ ಬಹಳ ದುಃಖವಾಗುವುದು. ನಿನ್ನ ಪ್ರತಿಯೊಂದು ತೊಟ್ಟು–ಕಣ್ಣೀರೂ ನನ್ನ ಹೃದಯವನ್ನು ಚುಚ್ಚುವುದು—ಕಾಗದವನ್ನು ಬರೆಯುತ್ತೇನೆಂದು ನಗುತ್ತಾ ಹೇಳು' ಎಂದ. ಅದಕ್ಕೆ ನಾನೇನು ಹೇಳಿದೆನೋ ಅದೀಗ ನನಗೆ ಜ್ಞಾಪಕವಿಲ್ಲ. ಏನಾದರೇನು, ನಾನು ಏನೆಂದರೇನು? ಅವನು ನನ್ನನ್ನು ಪ್ರೀತಿಸುತ್ತಾನೆ. ಅದಕ್ಕಿಂತಲೂ ಹೆಚ್ಚು ನನಗೆ ಇನ್ನೇನು ಬೇಕು?

೮—೧೦—೩೦

ಮದುವೆ! ಮದುವೆಯೆಂದರೆ ಎಷ್ಟು ಮಂದಿ ಸಂತೋಷದಿಂದ ಹಿಗ್ಗುವರು; ಸುಖದ ಹೆದ್ದಾರಿ ಮದುವೆಯಂತೆ! ನಿಜವೇ?

ತಾವು ಪ್ರೀತಿಸುವವರನ್ನು ಪಡೆದ ವಧುಗಳಿಗೆ ನಿಜವಿರಬಹುದು. ನನಗೆ?..ಆದರೆ ನನಗೆ? ಮದುವೆಯೆಂದರೆ ಸಾಯುವದಕ್ಕಿಂತಲೂ ಕಷ್ಟ ವಾಗಿ ತೋರುವುದೇಕೆ? ಯಾರೊಡನೆ ಕೇಳಲಿ? ಕೇಳಿದರೂ ಹೇಳುವವ ರಾರು? ದೇವರನ್ನು ಬೇಡಲೇ? ದೇವರಿದ್ದರಲ್ಲವೆ ಬೇಡುವುದು? ಇದ್ದು ದಾಗಿದ್ದರೆ..ಅಯ್ಯೋ ದೇವರನ್ನೇಕೆ ದೂಷಿಸಲಿ? ಅಣ್ಣನಿಗೆ ದಯವೇ ಇಲ್ಲವೇಕೆ? ಯಾರನ್ನು ಮೊರೆಹೊಗಲಿ? ಅಮ್ಮನಂತೂ ಈ ಲೋಕ ದಲ್ಲೀಗ ಇಲ್ಲ.—ಅಕ್ಕ? ಅಕ್ಕನ ಮಾತು ಕೇಳುವವರಾರು? ಅವನು ವರನಾಗದ ಮದುವೆಯಲ್ಲಿ ನಾನು ವಧುವಾಗುವದು ಹೇಗೆ? ಅವನೇನು ತಿಳಿದುಕೊಳ್ಳುವನು? ನಿನ್ನೆ ದಿನ ಬಂದಿರುವ ಅವನ ಕಾಗದವನ್ನು ಒಡೆ ಯಲೇ? ಧೈರ್ಯಬರುವುದಿಲ್ಲವೇಕೆ? ಏನಾದರೂ ಇರಲಿ, ಓದಿಬಿಡುವೆನು.. ಅಯ್ಯೊ..ಅವನು ಬರೆದಿರುವುದೇನು? ನನ್ನ ಮುಂದಿನ ಜೀವನವು ಸುಖ ಸಂತೋಷಪೂರ್ಣವಾಗಿರಲೆಂದು ದೇವರಲ್ಲಿ ಅವನ ಬೇಡಿಕೆಯಂತೆ! ಸುಖ! ಸಂತೋಷ! ಎಂತಹ ಹಾಸ್ಯಾಸ್ಪದ..ಅವನಿಲ್ಲದ ಮೇಲೆ ಸುಖವೇ? ಅವನೂ ನನ್ನನ್ನು ತಿಳಿಯಲಾರನೇನು? ಹೇಗವನನ್ನು ಮರೆ ಯಲಿ! ಅಂದಿನ ಸಾಯಂಕಾಲ....ನಾವು ತಿರುಗಾಡಲು ಹೋದ ಸಾಯಂಕಾಲ....ಅದನ್ನು ಮರೆಯುವುದು ನನ್ನಿಂದ ಸಾಧ್ಯವೇ? ಮಲ್ಲಿಗೆಯ ಹೂವನ್ನು ಕೊಯಿದು ನನ್ನ ಕೈಲಿಟ್ಟು, 'ಕಾಗದ ಬರೆಯು ತ್ತೀರು' ಎಂದು ಹೇಳುವಾಗ ಚಿತ್ರಿತವಾದ ಅವನ ಸ್ನೇಹಪೂರ್ಣವಾದ ಮುಖ, ಪ್ರೇಮವನ್ನು ಹೊರಚೆಲ್ಲುತ್ತಿದ್ದ ಕಣ್ಣುಗಳು..ಅದೆಲ್ಲವನ್ನೂ ಹೇಗೆ ತಾನೆ ನನ್ನ ಹೃದಯದಿಂದ ಹೊರದೂಡಲಿ?..ಅಯ್ಯೋ..ಅವನ ಕಾಗದಗಳು..ಪ್ರತಿ ಶಬ್ದದಿಂದಲೂ ಉಕ್ಕುತ್ತಿರುವ ಪ್ರೇಮ..ಹೀಗಾಗು ವುದೆಂದು ಯಾರಿಗೆ ತಿಳಿದಿತ್ತು? ನನಗೇಕೆ ಹುಚ್ಚು ಹಿಡಿಯುವುದಿಲ್ಲ!

ಅತ್ತೆಯ ಪೆಟ್ಟುಗಳನ್ನು ಸಹಿಸಬಹುದು; ಲೇಖನಿಯ ಒದೆಗಳನ್ನು ಸಹಿಸುವುದು ಕಷ್ಟ. ಅದರಲ್ಲಿಯೂ ಅವನ ಲೇಖನಿಯಿಂದ ಬರೆಯಲ್ಪಟ್ಟ ಮಾತುಗಳನ್ನು ಓದುವಾಗ ನನ್ನ ಕಲ್ಲಿನಂಥ ಹೃದಯವೂ ಕರಗಿಹೋಗುತ್ತಿದೆ. ಮದುವೆಯ ದಿನ ನಾನು ಮನಸ್ಸಿನಲ್ಲಿ ಮಾಡಿಕೊಂಡ ದೃಢ ಪ್ರತಿಜ್ಞೆಯೂ ಅವನ ಕಾಗದವನ್ನು ಓದಿದೊಡನೆ ಓಡಲು ಯತ್ನಿಸುತ್ತಿದೆಯೇಕೆ? 'ನೀನೆಂಥ ಕ್ರೂರಿ ನರಸಿ, ನನ್ನ ಕಾಗದಗಳೊಂದಕ್ಕೂ ಪ್ರತ್ಯುತ್ತರವನ್ನೇ ಬರೆಯುತ್ತಿಲ್ಲವೇಕೆ?' ಎಂದು ಬರೆದಿರುವನು. ಹೌದು, ನಾನು ಕ್ರೂರಿ. . ಅಣ್ಣನು ನನ್ನ ಮೇಲೆ ನಡೆಯಿಸಿದ ಕ್ರೂರತನದ ಪ್ರತಿಫಲವಾಗಿ ನಾನವನಿಗೆ ಕ್ರೂರಿ. . ಇದೀಗ ಇಂದಿನ ನ್ಯಾಯ. ಏನು ಮಾಡಲಿ? ಏನೆಂದು ಬರೆಯಲಿ? ಬರೆಯದೆ ಇರಲೆ? ಅವನೇನೆಂದು ತಿಳಿದುಕೊಳ್ಳುವನು? ಈ ತರದ ಸಂಕಟವನ್ನು ಅನುಭವಿಸುವುದಕ್ಕೇ ನನ್ನ ಜನ್ಮವಾಯಿತೇನು? ನಾನೇಕೆ ಸಾಯುವುದಿಲ್ಲ? ಬಾವಿಗೆ ಹಾರಲೇ? ಹಾರಲಾರೆ. . ನನ್ನನ್ನು ತನ್ನ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅಕ್ಕನಿರುವಳು—ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ನೋಡುವ ಪತಿ ಇರುವರು. ಅವರ ಅಷ್ಟೊಂದು ಪ್ರೀತಿಯ ಪ್ರತಿಫಲವಾಗಿ ಕೊಡಲು ನನ್ನಲ್ಲೇನಿದೆ?. . . . ಇದ್ದುದನ್ನೆಲ್ಲಾ ಅವನಿಗೆ ಬಲು ದಿನಗಳಹಿಂದೆಯೇ ಅರ್ಪಿಸಿಬಿಟ್ಟಿರುವೆನು. . ಇನ್ನಿರುವುದೇನು? ಅವರಿಗಾಗಿ ಭಕ್ತಿಯಿಂದ ಚಿಕ್ಕ ದೊಡ್ಡ ಕೆಲಸಗಳನ್ನು ಜಾಗರೂಕತೆಯಿಂದ ಮಾಡುವೆನು. ಆದರೆ ಯಾವುದು ಮುಖ್ಯವೋ ಅದು ಮಾತ್ರ ನನ್ನೆಡೆಯಲ್ಲಿಲ್ಲ—ಏನು ಮಾಡಲಿ?. . ಸಾಯಲಾರೆ. . ಬದುಕಲಾರೆ. . . . ಏನು ಮಾಡಲಿ?. . . . ಏನು ಮಾಡಲಿ. . . . ಕೇಳುವುದು ಯಾರೊಡನೆ. .

೧೮—೧೧—೩೧

ನಾಳೆ ಅವನಿಗೆ ಮದುವೆಯಂತೆ! ಆಗಲಿ. . . ನನಗೇನು? ನಾನೇಕೆ 'ಅಯ್ಯೋ' ಅನ್ನಬೇಕು? ಮೂರು ವರುಷಗಳಿಂದಲೂ 'ಅವನಿಗೆ ಬೇಗ

ಮದುವೆಯಾಗಲಿ ನನ್ನನ್ನವನು ಮರೆಯಲಿ' ಎಂದು ಪ್ರಾರ್ಥಿಸುತ್ತಿದ್ದ
ನಾನು ಇಂದೇಕೆ ಅವನ ಮದುವೆಯ ವರ್ತಮಾನ ಕೇಳಿ ದುಃಖಿತಳಾಗ
ಬೇಕು? ನನಗಾಗಿ ಅವನೇಕೆ ಮದುವೆಯಾಗದಿರಬೇಕು? ನಾನು ಮನ
ಸ್ಸನ್ನು ಎಷ್ಟೆಷ್ಟು ಕಾರಣಗಳನ್ನು ಕೇಳಿಕೊಂಡರೂ ಹೃದಯಾಂತರಾಳ
ದಿಂದ ಸಣ್ಣದನಿಯೊಂದು 'ಅಯ್ಯೋ' ಎನ್ನುವುದೇಕೆ? ಆಗಲಿ..ಅವನು
ಮದುವೆಯಾಗಲಿ..ಪರಮಾತ್ಮನು ಅವರಿಬ್ಬರನ್ನೂ ಕಾಪಾಡಲಿ..ಅವರ
ಸಂಸಾರವು ಸುಖಮಯವಾಗಲಿ......

೨೧—೩—೩೪

ನಾಳೆ ಅವನು ಹೆಂಡತಿಯನ್ನೂ ಮಗುವನ್ನೂ ಕರೆದುಕೊಂಡು
ಬರುವನಂತೆ. ದೇವಾ, ಅವನು ಬಂದಾಗ ಅವನ ಹೆಂಡತಿಯ ಇದಿರಿನಲ್ಲಿ
ನನ್ನ ಅಧೈರ್ಯ ಪ್ರಕಟವಾಗದಂತೆ ಅನುಗ್ರಹಿಸು. ಹೃದಯವೇ—ಸ್ವಲ್ಪ
ಶಾಂತವಾಗು..ಮನಸ್ಸೇ ಉದ್ವೇಗವನ್ನು ಸಹಿಸಿಕೋ. ಅವನೊಡನೆ
ಏನೆಂದು ಮಾತಾಡಲಿ..ಈ ಮುಖವನ್ನು ಅವನಿಗೆ ಹೇಗೆ ತೋರಿಸಲಿ?
ಪರಮಾತ್ಮಾ—ನನ್ನ ಕಣ್ಣುಗಳು ನಾಳೆ ಅವನಿದಿರಿನಲ್ಲಿ ನನ್ನ ಹೃದಯದ
ಗುಟ್ಟನ್ನು ಹೊರಗೆಡವದಂತೆ ಕಾಪಾಡು......

೨೨—೩—೩೪

ಅವನು ಹೆಂಡತಿ ಮಗುವಿನೊಡನೆ ಬಂದು ಕುಳಿತಿರುವನು. ಹೇಗೆ
ಹೋಗಿ ಅವನಿಗೆ ಮುಖ ತೋರಿಸಲಿ! ಏನೆಂದು ಮಾತಾಡಲಿ! ಹೇಗೆ
ಹೊರಗೆ ಹೋಗಲಿ? ಹೋಗದೆ ಇರಲಾಗುವುದೇ?··ಅವನು ಹೇಳುತ್ತಿರು
ವದೇನು? 'ಚೆನ್ನಾಗಿರುವೆಯಾ ಸರಸಿ?'..'ಹೌದಪ್ಪ ಚೆನ್ನಾಗಿರುವೆನು.
ನೀನು ಹೆಂಡತಿಯನ್ನೂ ಮಗುವನ್ನೂ ಕರೆತಂದುದು ಬಲು ಸಂತೋಷ
ವಾಯಿತು...ಮಗುವಿನ ಹೆಸರೇನು? ಪ್ರಭೆ ಎಂತಲೇ—ಚೆನ್ನಾಗಿದೆ..
ನನ್ನ ಪ್ರೀತಿಯ ಹೆಸರದು..ಬಾಮ್ಮಾ ಪ್ರಭಾ..ಮಗು ಎಷ್ಟು ಮುದ್ದಾ
ಗಿದೆ? ನಾನು ಕರೆದೊಡನೆಯೇ ನಗುತ್ತ ನನ್ನೆಡೆಗೆ ಬರುತ್ತಿರುವಳಲ್ಲ.
ಅವನ ಕಣ್ಣುಗಳಂತೆಯೇ ಇರುವ ತನ್ನ ಕಣ್ಣುಗಳಿಂದ ನನ್ನನ್ನು

ನೋಡುತ್ತಿರುವಳಲ್ಲ. ಅವನ ಅದೇ ಆ ವಿಶಾಲವಾದ ಕಣ್ಣುಗಳು–ಅದೇ ಮೂಗು–ಅದೇ ಕೆಂಪು ತುಟಿಗಳು–ಅವನೇ ಮಗುವಿನ ನಿರ್ಮಲ ಕಣ್ಣುಗಳಿಂದ ನೋಡುತ್ತಿರುವನೇನು? ಅವನ ಹೆಂಡತಿ ಅವಳು ಅವನಿಗೆ ಅನುರೂಪಳಾದ ಪತ್ನಿ..ಅವಳ ನಗುಮುಖ..ಹೌದು, ಅವಳವನಿಗೆ ಅನುರೂಪಳಾದ ಪತ್ನಿ. ಅವನ ಮುಖದಲ್ಲಿ ಸುಖ ಸಂತೋಷ ನಲಿದಾಡುತ್ತಿದೆ. ಅವನು ಈಗ ಸುಖಿ. ದೇವರವನನ್ನು ಸದಾ ಹಾಗಿಟ್ಟಿರಲಿ..ಅವನ ಹೆಂಡತಿಯನ್ನೂ ಮಗುವನ್ನೂ ಪರಮಾತ್ಮನು ಕಾಪಾಡಲಿ..ಇದೇ ನನ್ನ ಪ್ರಾರ್ಥನೆ..

ನಾನು! ದುಃಖಮಯವಾದ ಪ್ರಪಂಚದಲ್ಲಿ ನಾನೇಕೆ ಸುಖವನ್ನು ಬಯಸಬೇಕು? ಸುಖ ಪಡೆಯಲು ನನಗಾವ ಅಧಿಕಾರವೂ ಇಲ್ಲ.. ಆದರೆ ದೇವಾ! ನನಗೆ ಜ್ಞಾಪಕವನ್ನು ಮಾತ್ರ ಕೊಡಬೇಡ. ನೆನಪು ಬೀಸಿರುವ ಬಲೆಯಿಂದ ನನ್ನನ್ನು ಬಿಡಿಸು. ಮರೆಯಲು ಪ್ರಯತ್ನಿಸಿದಷ್ಟೂ ಚಿಗುರುವ ಜ್ಞಾಪಕದ ಹಿಡಿತದಿಂದ ನನ್ನನ್ನು ಪಾರುಮಾಡು.. ನನಗೇಕೆ ಹುಚ್ಚು ಹಿಡಿಯುವುದಿಲ್ಲ......

ಮೇ ೧೯೩೪

## ....ಯಾರು ?

‘ಮಹೇಶ,

ಬೆಳಗ್ಗೆ ‘ನಿನಗೆ ಮದುವೆಯಾಗಿದೆಯೇ ?’ ಎಂದು ಕೇಳಿದೆ. ನಿನಗೆ ನನ್ನ ಪ್ರಶ್ನೆಯಿಂದ ಆಶ್ಚರ್ಯವಾದಂತೆ ತೋರಿತು. ನೀನು ‘ಇಲ್ಲ’ ಎಂದೆ. ನಿನ್ನ ‘ಇಲ್ಲ’ ಕೇಳಿ ನನಗೆ ನಿನಗಿಂತಲೂ ಹೆಚ್ಚಿನ ಆಶ್ಚರ್ಯವಾಯಿತು. ಬಹುಶಃ ಆ ಸ್ತ್ರೀಯನ್ನು ನೀನು ಮದುವೆಯಾಗಿರಬಹುದು ಎಂದಿದ್ದೆ.

ಕಳೆದ ರಜೆಯಲ್ಲಿ ನಿನ್ನನ್ನು ನಮ್ಮನೆಗೆ ಆಮಂತ್ರಿಸಿದೆ. ಊರಿಗೆ ಹೋಗಬೇಕು ಎಂದು ನೆಪನ ಹೇಳಿ ನಮ್ಮನೆಗೆ ಬರಲಿಲ್ಲ ನೀನು. ಆದರೆ ನೀನು ಊರಿಗೆ ಹೋಗಲಿಲ್ಲ. ಇದೇ ಊರಲ್ಲಿದ್ದೆ; ಅದೂ ಚರಿತ್ರಹೀನಳಾದ ಸಿನಿಮಾ ನಟಿಯೊಬ್ಬಳೊಡನೆ.

ಮಹೇಶ, ಜನರ ಮುಖನೋಡಿ ಅವರ ಗುಣ ತಿಳಿದುಕೊಳ್ಳುವ ಶಕ್ತಿ ನನಗಿದೆ ಎಂದು ನನಗೆ ಹೆಮ್ಮೆಯಿತ್ತು. ಅದೇ ಎಂಟು ತಿಂಗಳ ಮೊದಲು ನಿನ್ನನ್ನು ಮೊಟ್ಟಮೊದಲು ನೋಡಿದಾಗ ನಿನ್ನ ವಿಷಯಗಳೊಂದೂ ತಿಳಿಯದಿದ್ದರೂ ನಿನ್ನನ್ನು ಜೀವದ ಗೆಳೆಯನನ್ನಾಗಿ ಮಾಡಿಕೊಂಡೆ. ಅಷ್ಟೊಂದು ನಂಬಿಕೆ ಹುಟ್ಟಿಸಿತು ನಿನ್ನ ಮುಖ. ನಿನ್ನ ಯಾತನಾಮಯವಾದ ಆ ದೊಡ್ಡ ದೊಡ್ಡ ಕಣ್ಣುಗಳನ್ನು ನೋಡಿ ‘ಪಾಪ, ನೊಂದ ಜೀವಿ; ಪೂರ್ವೋತ್ತರಗಳನ್ನು ಕೇಳಿ ನೋಯಿಸಬಾರದು’ ಎಂದುಕೊಂಡಿದ್ದೆ. ಅಂದಿನ ಹೆಮ್ಮೆ ಎಲ್ಲಾ ಈಗ ಹುಡಿಯಾಗಿ ಹೋಯ್ತು, ಮಹೇಶ.

ನಮ್ಮದು ಬರೇ ಎಂಟು ತಿಂಗಳ ಗೆಳೆತನ—ಆದರೂ ನೀನು ನನಗೆ ಸ್ವಂತ ತಮ್ಮನಿಗಿಂತಲೂ ಹೆಚ್ಚಾಗಿ ಹೋಗಿದ್ದೆ. ನಾನು ಎಂದೂ ನಿನ್ನಲ್ಲಿ ಮುಚ್ಚುಮರೆ ಮಾಡಿದವನಲ್ಲ. ನೀನೂ ನನ್ನಲ್ಲಿ ಅದೇ ತರದ ವಿಶ್ವಾಸ ವನ್ನಿಟ್ಟಿರುವೆ ಎಂಬ ಭಾವನೆ ಇತ್ತು ನನಗೆ.

ವಂಚನೆಯಿಂದ ನನ್ನ ಗೆಳೆತನ ಸಂಪಾದಿಸಬೇಕಾದ ಆವಶ್ಯಕತೆ ನಿನಗೇನಿತ್ತು ಮಹೇಶ? ಬಹುಶಃ 'ನನ್ನ ಸ್ವಂತ ಜೀವನ ನನ್ನದು. ಅದಕ್ಕೂ ನಮ್ಮ ಸ್ನೇಹಕ್ಕೂ ಸಂಬಂಧವೇನು?' ಎಂದು ನೀನು ಕೇಳ ಬಹುದು. ಒಂದು ತರದಿಂದ ನೋಡಿದರೆ ಸಂಬಂಧವೇನೂ ಇಲ್ಲ, ನಿಜ. ಹಾಗೆಣಿಸುವ ಸ್ನೇಹಿತರೂ ನಿನಗೆ ಬೇಕಾದಷ್ಟು ಜನ ಸಿಕ್ಕಬಹುದು. ಆದರೆ ನಮ್ಮ ಮನೆಯವನೊಬ್ಬ ಎಂಬಂತೆ ನನ್ನ ತಾಯಿ, ಅಕ್ಕ, ತಂಗಿಯ ರೊಡನೆ ನಿನ್ನನ್ನು ಒಡನಾಡಿಸಿದ ನನಗೆ ಅದು ಒಪ್ಪುವುದಿಲ್ಲ. ಸ್ನೇಹಿತ ನಾದವನಲ್ಲಿ ಪ್ರೇಮ, ಆದರ, ವಿಶ್ವಾಸ, ಗೌರವ ಎಲ್ಲಾ ಇಡುವಂತಿರ ಬೇಕು. ಇಷ್ಟರ ತನಕ ನಿನ್ನನ್ನು ಅದೇ ಭಾವನೆಯಿಂದ ನೋಡುತ್ತಲೂ ಇದ್ದೆ. ಆದರೆ ಈಗ ನೀನು ಸಾಮಾನ್ಯಳಾದ ನಟಿಯೊಬ್ಬಳೊಡನೆ ಜೀದಿ ಜೀದಿ ಅಲೆಯುವುದನ್ನು, ಅವಳ ಸಹವಾಸದಲ್ಲಿ ನೀನಿರುವುದನ್ನು ನೋಡಿದ ಮೇಲೂ ಆ ಭಾವನೆಗಳಿರಬೇಕೆಂದರೆ ಹೇಗೆ ಸಾಧ್ಯ? ನಿನ್ನೊಡನೆ ನನ್ನ ವ್ಯವಹಾರದಲ್ಲಿ ವ್ಯತ್ಯಾಸವನ್ನು ಕಂಡು ಬೆಳಗ್ಗೆಯೇ ನೀನು ಕಾರಣ ವನ್ನು ಕೇಳಿದೆ. ನಿನ್ನ ಮುಖ ನೋಡುತ್ತ ನಿನ್ನ ಆ ವೇದನೆಯಿಂದ ತುಂಬಿದ ಕಣ್ಣುಗಳನ್ನು ನೋಡುತ್ತ ನಾನು ಕಾರಣವನ್ನು ಹೇಳಲಾರದೆ ಹೋದೆ. ಅದರ ಸಲುವಾಗಿಯೇ ಈಗ ಬರೆಯಬೇಕಾಯಿತು.

ಮಹೇಶ, ಇದೇ ಊರವನಾದರೂ ನಿನ್ನೊಡನಿರುವ ಸಲುವಾಗಿ ಹಾಸ್ಟೆಲ್ ಸೇರಿದೆ. ನಾವಿಬ್ಬರೂ ಒಂದೇ ರೂಮಿನಲ್ಲಿದ್ದೆವು. ಕೇವಲ ಭಾವನೆಯೇ ಆದರೂ, ನೀನೊಬ್ಬ ಆದರ್ಶಸ್ನೇಹಿತ ಎಂಬ ಭಾವನೆ ಇತ್ತು ನನಗೆ. ಆಗ ನಿನ್ನೊಡನೆ ಕಳೆದ ಒಂದೊಂದು ನಿಮಿಷವೂ ಅಮೂಲ್ಯ ವಾಗಿತ್ತು. ಆದರೆ ಈಗಲೂ ಅದೇ ರೀತಿಯಿಂದಿರುವುದು ನಿನ್ನ ನಡುವಳಿಕೆ ಯನ್ನು ತಿಳಿದ ನನಗೆ ಅಸಾಧ್ಯ. ನಾನು ಇಂದೇ ನಮ್ಮನೆಗೆ ಹೊರಟು

ಕಂ ಬ ಸಿ

ಹೋಗುತ್ತೇನೆ. ಬಹುಶಃ ಕಾಲೇಜಿನಲ್ಲಿ ಒಬ್ಬರನ್ನೊಬ್ಬರು ನೋಡ ಬಹುದು. ಆಗ ನನ್ನೊಡನೆ ಮಾತಾಡಲೆತ್ನಿಸಿ ನಮ್ಮ ಹಿಂದಿನ ಆದರ್ಶ ಸ್ನೇಹದ ನೆನಪನ್ನು ಕೆಡಿಸಬೇಡ, ಇದೊಂದೇ ನಿನ್ನಲ್ಲಿ ನನ್ನ ಆಗ್ರಹದ ಕೋರಿಕೆ.

ವಸಂತ'

ಕಾಗದ ಬರೆದಿಟ್ಟು ವಸಂತ ಹೊರಟುಹೋದ. ತಾನು ಜೀವಕ್ಕಿಂತ ಮಿಗಿಲೆಂದು ತಿಳಿದ ಗೆಳೆಯ, ನಡತೆ ಇಲ್ಲದವ ಎಂದು ಬಹಳ ನೊಂದು ಕೊಂಡಿದ್ದ. ಹಾಗೆಯೇ ಹಿಂದುಮುಂದಾಲೋಚಿಸದೆ ಕಾಗದ ಬರೆದಿಟ್ಟು ಹೊರಟುಬಿಟ್ಟಿದ್ದ.

ಆ ಬೆಳೆದುಬಂದಿದ್ದ ಸ್ನೇಹವನ್ನು ಹೃದಯದಿಂದ ಕಿತ್ತೆಸೆಯು ವುದು ಮಾತ್ರ ಹೊರಟು ಬರುವಷ್ಟು ಸುಲಭವಾಗಿರಲಿಲ್ಲ. ತಾನು ಮಾಡಿದ್ದು ಸರಿ ಎಂದು ತನ್ನನ್ನು ತಾನೆ ಸಂತೈಸಿಕೊಂಡರೂ ಮನಸಿನ 'ಒಳಗಿನ ಒಳಗಿನ ಒಳದನಿಯೊಂದು' 'ನಿನ್ನದು ತಪ್ಪು' ಎಂದು ಚುಚ್ಚು ತ್ತಿತ್ತು.

ಸಾಯಂಕಾಲ ಇತರ ಸ್ನೇಹಿತರೊಡನೆ ಸಿನಿಮಾಕ್ಕೆ ಹೋದ. ಆದರೆ ಅದು ಪೂರೈಸುವತನಕ ಕೂರಲಾರದೆ ಎದ್ದವನು ನೇರವಾಗಿ ಹಾಸ್ಟೆಲ್ ಕಡೆಗೆ ಹೋದ. ಹೊರಗಿನಿಂದ ಮಹೇಶನ ರೂಮಿನಲ್ಲುರಿಯುವ ದೀಪ ವನ್ನು ನೋಡಿದಾಗ ತಾನು ಹಾಸ್ಟೆಲ್ಲಿಗೆ ಬಂದಿರುವೆನೆಂದವನಿಗೆ ಬೋಧೆ ಯಾಯ್ತು. ಆಶಾಪೂರ್ಣದೃಷ್ಟಿಯಿಂದೊಮ್ಮೆ ಆ ರೂಮನ್ನು ನೋಡಿ ಹಿಂದಿರುಗಿದ. ಮತ್ತೆ ಎಲ್ಲೆಲ್ಲೋ ಸುತ್ತಾಡಿಕೊಂಡು ಮನೆಗೆ ಹೋಗು ವಾಗ ಹತ್ತು ಹೊಡೆದುಹೋಗಿತ್ತು. ಒಳಗೆ ನುಗ್ಗುವಾಗ ಇನ್ನೂ ಎಚ್ಚ ತ್ತಿದ್ದ ಅವನ ಚಿಕ್ಕ ತಂಗಿ ನಲಿನಿ 'ಅಣ್ಣಾ, ಮಹೇಶ ನಿನಗೊಂದು ಕಾಗದ ಕೊಟ್ಟು ಹೋದ. ನಿನ್ನ ರೂಮಿನಲ್ಲಿಟ್ಟಿದ್ದೇನೆ' ಎಂದಳು.

ಮಹೇಶನ ಕಾಗದ! ಊಟಕ್ಕೆ ಬಾರೆನ್ನುತ್ತಿದ್ದ ತನ್ನ ತಾಯನ್ನು ಸಹ ಲಕ್ಷಿಸದೆ ರೂಮಿನ ಬಾಗಿಲನ್ನು ಹಾಕಿಕೊಂಡು ಓದತೊಡಗಿದ—

‘ ವಸಂತ,

ನಿನ್ನ ಬೆಳಗಿನ ಕಾಗದ ಬಂದಿದೆ. ನೀನೂ ಎಂದಾದರೊಮ್ಮೆ ಈ ಮಾತುಗಳನ್ನು ಹೇಳಬಹುದು ಎಂದು ನಾನೆಣಿಸಿರಲಿಲ್ಲ. ಆದುದರಿಂದಲೇ ನಿನ್ನ ಕಾಗದ ನೋಡಿ ಸ್ತಬ್ಧನಾಗಿ ಹೋದೆ. ಮತ್ತೆ ನೀನು ಸಾಮಾನು ಸಾಗಿಸುವುದನ್ನು ನೋಡುತ್ತಿದ್ದರೂ ಏನನ್ನೂ ಹೇಳಲಾರದೆ ಹೋದೆ. ನನ್ನ ಮೌನವನ್ನು ನೋಡಿ ನೀನೇನು ತಿಳಿದುಕೊಂಡೆಯೋ ತಿಳಿಯದು. ಬಹುಶಃ ನಿನ್ನ ಸಂಶಯವು ಇನ್ನಷ್ಟು ದೃಢವಾಗಿರಬಹುದು.

“ಅಷ್ಟು ಹೊತ್ತಿನಿಂದಲೂ ಯೋಚಿಸುತ್ತಿದ್ದೇನೆ. ನಿನ್ನಲ್ಲಿ ಹೇಳಬಾರದ ವಿಷಯ ಎಂದು ನನಗೀಗ ತೋರುವುದಿಲ್ಲ. ಹಾಗೆ ನೋಡುವುದಾದರೆ ಯಾರಲ್ಲೂ ಹೇಳಬಾರದಂತಹ ವಿಷಯವೇನೂ ಅಲ್ಲ ಅದು. ಆದರೂ ನೋಡು ವಸಂತ, ನಾನು ಯಾವುದನ್ನು ಹೆಚ್ಚಿನದೆಂದು ತಿಳಿದಿರುತ್ತೇನೋ ಅಂತಹುದನ್ನು ಬೇರೆಯವರು ‘ ಇಷ್ಟೇ ’ ಎಂದು ನಕ್ಕರೆ ನನಗೆ ಬಲು ದುಃಖವಾಗುವುದು. ಅದರಿಂದ ನಾನು ನನ್ನ ಭಾವವನ್ನು ತಿಳಿಯಲಾರದವರೆದುರು ಮನಬಿಚ್ಚಿ ಮಾತಾಡಲು ಹಿಂಜರಿಯುತ್ತೇನೆ. ಈ ಕೆಲವು ತಿಂಗಳುಗಳ ಸಹವಾಸದಿಂದ ಸ್ವಲ್ಪಮಟ್ಟಿಗಾದರೂ ನೀನು ನನ್ನನ್ನು ಬಲ್ಲೆ. ಆದರೆ ಅದಕ್ಕಿಂತಲೂ ಹೆಚ್ಚಾಗಿ ನಾನು ನಿನ್ನನ್ನು ಬಲ್ಲೆ. ನಿನ್ನ ಒಳ್ಳೆಯ ಅಭಿಪ್ರಾಯಕ್ಕೆ ನಾನೆಷ್ಟು ಬೆಲೆ ಕೊಡುವೆನೆಂಬುದಕ್ಕೆ ನಾನೀಗ ಯಾರಿಗೂ ಇಂದಿನವರೆಗೂ ಹೇಳದಿದ್ದ ವಿಷಯಗಳನ್ನು ನಿನಗೆ ಬರೆಯುತ್ತಿರುವುದೇ ಸಾಕ್ಷಿಯಾಗಿದೆ.

“ನನಗೊಬ್ಬಳು ತಂಗಿ ಇರುವಳು ವಸಂತ—ನನ್ನ ತಾಯಿ ಸಾಯುವ ದಿನ ಹುಟ್ಟಿದ ಮಗು. ಆಗ ನಾನು ಮೂರು ನಾಲ್ಕು ವರ್ಷ [illegible]ದವನಾಗಿದ್ದರೂ ನನಗಿನ್ನೂ ಚೆನ್ನಾಗಿ ನೆನಪಿದೆ—ಮೃತ್ಯುವಿನ ಮಡಿಲಲ್ಲಿ ಮಲಗಿದ್ದ ನನ್ನ ಅಮ್ಮ—ಅವಳ ಹತ್ತಿರವೇ ಚೀರಿ ಚೀರಿ ಅಳುತ್ತ ಮಲಗಿದ್ದ ನನ್ನ ಪುಟ್ಟ ತಂಗಿ, ಮೌನವಾಗಿ ಕಣ್ಣೀರು ಸುರಿಸದಿದ್ದರೂ ಅಳುತ್ತಿದ್ದ ನನ್ನ ತಂದೆಯ ಮುಖ......

“ವಸಂತ, ಈಗ ಇದೆಲ್ಲಾ ಏಕೆ ಎಂದು ನೀನು ಕೇಳಬಹುದು.

ನನ್ನ ಮತ್ತು ಪಾಪನ (ನನ್ನ ಆ ತಂಗಿಯ ಮುದ್ದಿನ ಹೆಸರು.) ಪ್ರೇಮದ ಆಳವನ್ನು ತಿಳಿದುಕೊಳ್ಳಬೇಕಾದರೆ, ನಾನವಳನ್ನು ನನ್ನ ಹಿರಿಯಕ್ಕ ಪ್ರಭೆಗಿಂತ ಹೆಚ್ಚೇಕೆ ಪ್ರೀತಿಸುವೆನೆಂಬುದನ್ನು ತಿಳಿದುಕೊಳ್ಳಬೇಕಾದರೆ ಅವಳು ಹುಟ್ಟಿದ ದಿನ ನಮ್ಮ ತಾಯಿಯು ಸತ್ತು ಹೋದುದನ್ನು ಹೇಳಿಯೇ ತೀರಬೇಕು.

"ಆಗ ಪಾಪ ಎಳೆಗೂಸಾದರೂ, ನನ್ನೊಡನೆ ಆಡದವಳಾದರೂ ನನಗೆ ಅವಳೆಂದರೆ ಪ್ರಾಣ. ನಾವು ಬೆಳೆಯುತ್ತ ಬಂದಂತೆ ನಮ್ಮ ಪ್ರೇಮವೂ ಬೆಳೆಯತೊಡಗಿತು. ನಾನು ಪ್ರಭಾ ಎಲ್ಲಾ ಜಗಳವಾಡಿಕೊಳ್ಳುತ್ತಿದ್ದೆವು. ಆದರೆ ನನಗೂ ಪಾಪನಿಗೂ ಒಂದೇ ಒಂದು ಸಾರಿಯಾದರೂ ಜಗಳವಾಗಿಲ್ಲ. ಪ್ರಭೆ ಈಗ ಗಂಡನ ಮನೆಯಲ್ಲಿ ಸಂಸಾರ ಮಾಡುತ್ತಿದ್ದಾಳೆ. ಅವಳಿಗೆ ಮದುವೆಯಾದ ವರ್ಷವೇ ನಮ್ಮ ತಂದೆಯೂ ಪುನಃ ಮದುವೆ ಮಾಡಿಕೊಂಡರು. ಪಾಪನಿಗೀಗ ಹತ್ತೊಂಬತ್ತೋ ಇಪ್ಪತ್ತೋ ವರ್ಷ ವಯಸ್ಸು. ಅವಳಿಗೆ ಇನ್ನೂ ಹನ್ನೊಂದು ವರ್ಷ ತುಂಬಿರಲಿಲ್ಲ. ಆಗಲೇ ತಂದೆ-ತಾಯಿಯರಿಲ್ಲದ ನಮ್ಮ ಸೋದರತ್ತೆಯ ಮಗನಿಗವಳನ್ನು ಕೊಟ್ಟು ಮದುವೆ ಆಗಿ ಹೋಗಿತ್ತು. ಅವಳ ಮದುವೆಯಾಗುವಾಗಿನ್ನೂ ಶಾರದಾ ಬಿಲ್ಲು ಪಾಸಾಗಿರಲಿಲ್ಲ. ಅದೇ ಅವಸರದಿಂದವಳಿಗೆ ಮದುವೆಯಾಯ್ತು. ಆಡುವ ಮಗು ಪಾಪನ್ನ ಅವನ ಕೊರಳಿಗೆ ಕಟ್ಟಿ ಅವನ ವಿಲಾಯತಿಯ ಶಿಕ್ಷಣಕ್ಕೆ ದುಡ್ಡು ತೆರಲು ನಮ್ಮ ತಂದೆ ಒಪ್ಪಿದರು. ಮದುವೆ ಆದ ವರ್ಷವೇ ಅವನು ಮೆಟ್ರಿಕ್ ಪಾಸಾದ. ಅವನ ಕಾಲೇಜು ಶಿಕ್ಷಣದ ಭಾರವನ್ನೂ ನಮ್ಮ ತಂದೆಯೇ ಹೊತ್ತರು. ಬಿ. ಎ. ಆದ ವರ್ಷವೇ ಎಮ್. ಎ. ಯನ್ನು ಗುರಿಯಾಗಿಟ್ಟುಕೊಂಡು ಅವನು ಆಕ್ಸಫರ್ಡಿಗೆ ಹೊರಟುಹೋದ. ಅವನು ಹೋಗುವಾಗ ನನ್ನ ತಂಗಿಗೆ ಹದಿನೈದು ವರ್ಷ ಪ್ರಾಯ. ಅದು ಸತ್ಯಾಗ್ರಹವು ಜೋರಾದ ಕಾಲ. ಪ್ರತಿಯೊಂದು ವ್ಯಕ್ತಿಯೂ ದೇಶಕ್ಕಾಗಿ ಬೇರೆಲ್ಲವನ್ನೂ ತೊರೆಯಲು ಸಿದ್ಧವಾದ ಸಮಯವದು. ಆಗ ನನ್ನ ತಂಗಿಗೆ ಆಗಿನ ರಾಜಕೀಯ ಪರಿಸ್ಥಿತಿಯನ್ನು ತಿಳಿದುಕೊಳ್ಳುವ ಶಕ್ತಿ ಇಲ್ಲದಿದ್ದರೂ ತನ್ನ ಗಂಡ ಪರದೇಶಕ್ಕೆ, ಅದರಲ್ಲೂ

ಇಂಗ್ಲೆಂಡಿಗೆ ಹೋಗಬಾರದೆಂಬ ಬಯಕೆ. ಏಕೆ ಹೋಗಬಾರದೆಂದರೆ ಕಾರಣ ಹೇಳಲು ಅವಳಿಗೇ ತಿಳಿಯದು. ಆದರೂ ಅವನು ಇಂಗ್ಲೆಂಡಿಗೆ ಹೋಗಬಾರದು ಎಂದು ಅವಳಿಗೆ. ಅವನು ಹೊರಡುವ ಮೊದಲು ನಮ್ಮನೆಗೆ ಬಂದಿದ್ದ. ನನಗೆ ಸರಿಯಾಗಿ ಗೊತ್ತಿಲ್ಲ—ಅವಳೂ ನನ್ನೊಡನೆ ಹೇಳಿಲ್ಲ. ಅವಳು ಅವನನ್ನು ಹೋಗಬಾರದೆಂದು ಪ್ರಾರ್ಥಿಸಿಕೊಂಡಳು ಎಂಬುದು ಕೇವಲ ನನ್ನ ಊಹೆ ಅಷ್ಟೆ. ಹಾಗೆ ಊಹಿಸಲು ನನಗೊಂದು ಕಾರಣವೂ ಇತ್ತು. ಪಾಪ ಮದುವೆ ಆದಂದಿನಿಂದ ಅವನೊಡನೆ ಒಂದು ಮಾತೂ ಆಡಿರಲಿಲ್ಲ. ಮದುವೆಯ ಸಮಯದಲ್ಲಿ ಅವಳಿಗೆ ಹನ್ನೊಂದು ವರ್ಷ ಸಹ ತುಂಬಿರಲಿಲ್ಲವೆಂದು ಮೊದಲೇ ಬರೆದಿದ್ದೇನೆ. ಗಂಡ ಎಂದರೆ ನಾಚಿಕೆ ಮಾಡುವ ವಸ್ತು. ಅವನು ಬಂದರೆ ಓಡಿ ಹೋಗಿ ಅವಿತುಕೊಳ್ಳಬೇಕು ಎಂಬವಳ ಭಾವನೆ ಆಗ. ಮತ್ತವನು ವರ್ಷಕ್ಕೊಮ್ಮೆ ಎಲ್ಲಾದರೂ ಒಂದೆರಡು ದಿನಗಳ ಮಟ್ಟಿಗೆ ಬಂದರೆ ಪಾಪ ಅವನಿದಿರು ಸಹ ಹೋಗುತ್ತಿರಲಿಲ್ಲ. ಅವನು ಇಂಗ್ಲೆಂಡಿಗೆ ಹೋಗುವ ಮೊದಲು ಬಂದಾಗ ಮಾತ್ರ ಅವಳಾಗಿಯೇ ಅವನ ರೂಮಿಗೆ ಹೋದುದನ್ನು ನೋಡಿ, ಅವಳು ಹೊರಗೆ ಬರುವಾಗ ಅತ್ತು ಕೆಂಪಾದ ಅವಳ ಕಣ್ಣುಗಳನ್ನು ನೋಡಿ, ಬಹುಶಃ ಅವಳು ವಿಲಾಯತಿಗೆ ಹೋಗಬಾರದೆಂದು ಅವನನ್ನು ಪ್ರಾರ್ಥಿಸಿರಬೇಕು ಎಂದು ನನ್ನ ಊಹನೆ. ಅವಳ ಮಾತಿಗೆ ಅವನು ಏನೆಂದನೋ ತಿಳಿಯದು. ಅಂತೂ ಅವನು ಹೊರಟುಹೋದ. ಅವನು ಹೋಗುವಾಗ ನಾವೆಲ್ಲರೆಣಿಸಿದಂತೆ ಅವಳು ಅವನಿದಿರು ಬರಲಿಲ್ಲ. ನಾನು ಅವಳನ್ನು ಕೂಗಲು ಹೋದೆ. ಅವಳ ರೂಮಿನ ಬಾಗಿಲು ಹಾಕಿತ್ತು. ಒಳಗಿನಿಂದ ಮೆಲ್ಲಮೆಲ್ಲನೆ ಅಳುವ ಶಬ್ದವೂ ಕೇಳಿಸುತ್ತಿತ್ತು. ನನಗೂ ಅವಳನ್ನು ಆಗ ಕೂಗಲು ಮನಸ್ಸು ಬರಲಿಲ್ಲ. ಹಾಗೆಯೇ ಹೊರಗೆ ಬಂದೆ. ಅವಳ ಗಂಡ ಹೊರಟು ನಿಂತಿದ್ದ. ಪಾಪ ವಿನಾ ಮನೆಯವರೆಲ್ಲಾ ಇದ್ದರು. ಅವನೂ ಅವಳಿಲ್ಲದಿರುವುದನ್ನು ನೋಡಿದಂತೆ ತೋರಲಿಲ್ಲ, ಹೊರಟೇ ಹೋದ.

"ಆದಿನವೆಲ್ಲ ನಾನು ಪಾಪನ್ನ ನೋಡಲಿಲ್ಲ. ತಂದೆ ಒಂದೆರಡು ಸಾರಿ 'ಎಲ್ಲಿ ಪಾಪ?' ಎಂದರು. ಚಿಕ್ಕಮ್ಮ 'ಅವಳ ರೂಮಿನಲ್ಲಿರಬಹುದು' ಎಂದುಬಿಟ್ಟರು. ಆಯಿತು ಅಷ್ಟೇ—

"ವಸಂತ, ಇದು ನಾಲ್ಕು ವರ್ಷದ ಹಿಂದಿನ ಮಾತು. ಆಗ ಪಾಪ ಏನೂ ತಿಳಿಯದ ಹುಡುಗಿ. ತಾಯಿಯ ಸ್ನೇಹ ಮಮತೆಗಳನ್ನರಿಯದೆ ಹುಡುಗನಾದ ನನ್ನೊಡನೆ ಹುಡುಗತನದಲ್ಲಿ ಬೆಳೆದ ತುಂಟು ಹುಡುಗಿ. ಮಾಡಬೇಡ ಎಂಬುದನ್ನು ಮಾಡಿಯೇ ತೀರುವೆನೆಂದು ಹೇಳುವ ಹಠ ವಾದಿ. ಅಂದಿಗೂ ಇಂದಿಗೂ ಕೇವಲ ನಾಲ್ಕೈದು ವರ್ಷಗಳ ಅಂತರ ವಸಂತ; ಆದರೂ ಈ ನಾಲ್ಕೈದು ವರ್ಷಗಳಲ್ಲಿ ಎಷ್ಟೊಂದು ನಡೆದು ಹೋಗಿದೆ! ಬಾಲ್ಯದಿಂದಲೂ ನನ್ನೊಡನೆ ಬೆಳೆದ ಪಾಪ ಈಗಿಲ್ಲ—ಅವಳ ಗಂಡ ವಿಲಾಯತಿಗೆ ಹೋಗುವಾಗಲೇ ಅವಳನ್ನು ಕೊಂದು ಹಾಕಿದ್ದ.

"ಅವನು ಹೋಗಿ ಒಂದೆರಡು ತಿಂಗಳಾಗುವ ತನಕ ಪಾಪ ಇಂದಲ್ಲ ದಿದ್ದರೆ ನಾಳೆ ಸಮಾಧಾನ ಹೊಂದುವಳೆಂದಿದ್ದೆ. ಆದರೆ ನನ್ನೆಣಿಕೆ ತಪ್ಪಾಯಿತ್ತು. ದಿನ ಕಳೆದಂತೆ ಪಾಪ, ನನ್ನ ತಾಯಿಯಿಲ್ಲದ ತಂಗಿ, ಪಾಪ ಬತ್ತಿ ಹೋದಳು. ತಂದೆ ಅವಳ ಸ್ಥಿತಿಯನ್ನು ನೋಡಿ 'ಏನೋ ಕಾಯಿಲೆ; ಔಷಧಿ ಮಾಡಿಸಬೇಕು' ಎಂದರು. ಚಿಕ್ಕಮ್ಮ 'ಸುಮ್ಮನೆ ಕೂತಲ್ಲೇ ಕೂತು ಸದಾ ಓದುತ್ತಿದ್ದರೆ ಕಾಯಿಲೆ ಬರದೆ ಏನಾದೀತು?' ಎಂದು ಗೊಣಗಿದರು. ನನಗೆ ಮಾತ್ರ ಪಾಪನಿಗೆ ಶಾರೀರಿಕ ಕಾಯಿಲೆ ಏನೂ ಇಲ್ಲವೆಂದು ಗೊತ್ತು. ಆದರೆ ಗಂಡ ಉಚ್ಚ ಶಿಕ್ಷಣಕ್ಕಾಗಿ ವಿಲಾಯತಿಗೆ ಹೋದರೆ ಇಷ್ಟೊಂದು ಕೊರಗುವುದೇಕೆ ಎಂಬುದು ನನಗೊಂದು ದೊಡ್ಡ ಸಮಸ್ಯೆಯಾಗಿತ್ತು. ಅವಳನ್ನೇ ಆ ವಿಷಯದಲ್ಲಿ ಕೇಳಲೂ ನನಗೆ ಇಷ್ಟವಿರಲಿಲ್ಲ. ಏನಿದ್ದರೂ ನನ್ನೊಡನೆ ಮುಚ್ಚುಮರೆ ಇಲ್ಲದೆ ಹೇಳು ವುದು ಅವಳ ಸ್ವಭಾವ. ಅಂತವಳು ಇಷ್ಟೊಂದು ಕೊರಗುತ್ತಿದ್ದರೂ ನನ್ನೊಡನೆ ಹೇಳದಿರುವಾಗ ನಾನೇ ಹೇಳೆಂದು ಹೇಗೆ ಕೇಳಲಿ ಎಂದೆನಿಸು ತ್ತಿತ್ತು ನನಗೆ. ಅವಳಾಗಿಯೇ ಹೇಳುವ ತನಕ ಕೇಳಲಾರೆ ಎಂದುಕೊಂಡೆ. ದಿನದಿನಕ್ಕೆ ನನ್ನ ಕಣ್ಣೆದಿರು ಅವಳು ಕುಗ್ಗುವುದನ್ನು ನೋಡುತ್ತಿದ್ದರೂ ನನ್ನ ನಿಶ್ಚಯವು ಬದಲಾಗಲಿಲ್ಲ.

"ಈ ಮಧ್ಯೆ ಪಾಪ ಅವನಿಗೆ ಒಂದೆರಡು ಕಾಗದ ಬರೆದಳು. ಒಂದಕ್ಕೂ ಪ್ರತ್ಯುತ್ತರವಿಲ್ಲ. ಅವನ ಈ ಔದಾಸೀನ್ಯವನ್ನು ನೋಡಿದ ಮೇಲಂತೂ

ಪಾಪನ ಮನೋವ್ಯಥೆಗೆ ಅವನೇ ಕಾರಣನೆಂದು ನನಗೆ ನಂಬಿಕೆಯಾಗಿ ಹೋಯ್ತು. ಇಷ್ಟೆಲ್ಲಾ ಆದರೂ ಪಾಪ ಮಾತ್ರ ಏನೂ ಹೇಳುತ್ತಿರಲಿಲ್ಲ. ಯಾವಾಗಲೂ ಇಡೀ ಮನೆಯನ್ನು ಬೆಳಗುತ್ತಿದ್ದ ಅವಳ ನಗುವು ಎತ್ತಲೋ ಮಾಯವಾಗಿತ್ತು. ಅವಳ ರೂಮಾಯ್ತು–ಅವಳಾಯ್ತು. ಆ ದಿನಗಳಲ್ಲಿ ನನ್ನ ಎಳೆತನದ ಗೆಳತಿ, ನನ್ನ ಮುದ್ದಿನ ತಂಗಿ ಇದ್ದೂ ಇಲ್ಲದಂತಿತ್ತು. ನಗು, ಆನಂದ, ಉತ್ಸಾಹಗಳಿಂದ ತುಂಬಿತುಳುಕುತ್ತಿದ್ದ ಆ ನಮ್ಮ ಮೊದಲಿನ ಜೀವನ ಹೊರಟೇಹೋಯ್ತು.

"ಹೇಗೋ ಎರಡು ವರ್ಷಗಳು ಕಳೆದು ಹೋದುವು ವಸಂತ. ನನ್ನ ಪಾಲಿಗೆ ಆ ಎರಡು ವರ್ಷಗಳು ಎರಡು ಯುಗಗಳಿಗಿಂತ ದೀರ್ಘವಾಗಿದ್ದುವು. ಅಂತೂ ಎರಡು ವರ್ಷ ಮುಗಿಯುವಾಗ ಪಾಪನ ಗಂಡ ಉಚ್ಚಶ್ರೇಣಿಯಲ್ಲಿ ಉತ್ತೀರ್ಣನಾಗಿ ಸ್ವದೇಶಕ್ಕೆ ಮರಳಿದ ಆ ದಿನ ನಮ್ಮನೆಯವರಿಗೆಲ್ಲಾ ಬಲು ಆನಂದ–ಉತ್ಸಾಹದ ದಿನ. ಪಾಪನ ಬತ್ತಿದ ಮುಖದಲ್ಲೂ ಎಳೆನಗು ಮೂಡಿತ್ತು. ಅಂದು ಬೆಳಗಿನ ರೈಲಿಗೇ ಅವನು ಬರುವುದೆಂದು ಗೊತ್ತಾಗಿತ್ತು. ನಾನು ನಮ್ಮ ತಂದೆಯೂ ಅವನನ್ನಿದಿರುಗೊಳ್ಳಲು ಸ್ಟೇಶನ್ನಿಗೆ ಹೋಗಿದ್ದೆವು. ಆದರೆ ಆ ದಿನ ಅವನು ಬರಲಿಲ್ಲ. ನಿರಾಶರಾಗಿ ನಾವು ಹಿಂದಿರುಗುವಾಗ ಪಾಪ ಬಾಗಿಲಲ್ಲಿ ನಿಂತು ರಸ್ತೆಯನ್ನೇ ನಿಟ್ಟಿಸುತ್ತಿದ್ದಳು. ನಾವಿಬ್ಬರೇ ಹಿಂತಿರುಗಿದುದನ್ನು ನೋಡಿ ಅವಳ ಬಾಡಿದ್ದ ಮುಖವು ಇನ್ನಷ್ಟು ಬಾಡಿತು. ಮಳೆಗಾಲದ ಬಿಸಿಲಿನಂತೆ ಮೂಡಿದ್ದ ಅವಳ ನಗುವೂ ಮಾಯವಾಯ್ತು. ನಾನದನ್ನು ನೋಡಿದರೂ ನೋಡದವನಂತೆ 'ಬಹುಶಃ ಟ್ರೇನ್ ಮಿಸ್ ಆಗಿರಬಹುದು; ನಾಳೆ ಬರುತ್ತಾನೆ' ಎಂದವಳನ್ನು ಸಂತೈಸಿದೆ. ನಾಳೆ ಬಂತು; ಎಷ್ಟೋ ನಾಳೆ ನಾಳೆಗಳಾಗಿ ಒಂದೆರಡು ವಾರಗಳೂ ಆದವು. ಅವನು ಬರಲಿಲ್ಲ–ಅವನ ಕಾಗದವೂ ಇಲ್ಲ.

"ಒಂದೆರಡು ವಾರಗಳ ತರುವಾಯ ಒಂದು ದಿನ ಪೇಪರ್ ತೆರೆಯುವಾಗ ಅವನ ಚಿತ್ರ! ಅದರ ಕೆಳಗಡೆ 'ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಎರಡು ವರ್ಷಗಳಿಂದ ಅಭ್ಯಾಸ ಮಾಡುತ್ತಿದ್ದ, ಉಚ್ಚಶ್ರೇಣಿಯಲ್ಲಿ

ಉತ್ತೀರ್ಣರಾಗಿ ಇದೀಗ ಭಾರತಕ್ಕೆ ಮರಳಿದ ಶ್ರೀ. ರಾಮರಾಯರು . .
. . ವಿಶ್ವವಿದ್ಯಾಲಯದ ಪ್ರೊಫೆಸರರಾಗಿ ನಿಯೋಜಿತರಾಗಿದ್ದಾರೆ. ಇವರಿಗೆ
ನಮ್ಮ ಅಭಿನಂದನೆ. .' ಇನ್ನೂ ಏನೇನೋ ಅವನ ಯಶೋಗಾನವಿತ್ತು.
ನನ್ನ ತಾಯಿಯ ಗಂಡನಿಗೆ ಉತ್ತಮವಾದ ಕೆಲಸ ದೊರೆಯಿತಲ್ಲಾ ಎಂದು
ಆ ಚಿತ್ರವನ್ನು ನೋಡಿ ನಾನು ಆನಂದಪಡಬೇಕಾಗಿದ್ದುದು ಸಹಜ.
ಆದರೆ ವಸಂತ, ಚಿತ್ರದಲ್ಲಿ ಚಿತ್ರಿತವಾದ ಅವನ ಮುಖವನ್ನು ನೋಡಿ
ನನಗೇಕೋ ತಡೆಯಲಾರದಷ್ಟು ಕೋಪ ಬಂತು. ಅವನ ಯಶಸ್ಸಿಗೆ
ಕಾರಣ ನಮ್ಮ ತಂದೆ. ಹಣಕೊಟ್ಟು ಓದಿಸಿ ಅವನನ್ನು ಮುಂದಕ್ಕೆ
ತಂದವರು ಅವರು. ಇಷ್ಟೆಲ್ಲಾ ಮಾಡಿದ್ದರೂ ಸ್ವದೇಶಕ್ಕೆ ಮರಳಿದ
ಮೇಲೆ ನಮಗೊಂದು ಕಾಗದ ಸಹ ಇಲ್ಲ! ಪಾಪನಿಗಾದರೂ ಒಂದು
ಗೆರೆ ಬರೆಯಬಹುದಿತ್ತು. ನಾಳೆ ನಾಳೆ ಎಂದು ಅವನ ಬರುವನ್ನು ಇದಿರು
ನೋಡುತ್ತಿರುವ ಪಾಪನನ್ನು ನೋಡುವಾಗಲೆಲ್ಲಾ ನನಗವನ ಮೇಲೆ
ಬಲು ಕೋಪ ಬರುತ್ತಿತ್ತು. ನಮ್ಮ ತಂದೆ ಒಳಗೊಳಗೇ ನೊಂದು
ಕೊಂಡರೂ ಪಾಪನಿದಿರಿನಲ್ಲಿ 'ಕೆಲಸದ ಗಲಾಟೆ ಬಹಳ ಇರಬಹುದು.
ಅದೇ ಬರಲೂ ಬರೆಯಲೂ ಸಮಯವಾಗಿರಲಾರದು. ಇನ್ನೇನು—ಬಂದೇ
ಬರುತ್ತಾನೆ' ಎನ್ನುತ್ತಿದ್ದರು. ಹೀಗೆ ಇದಿರು ನೋಡುವುದರಲ್ಲೇ ಎರಡು
ಮೂರು ತಿಂಗಳುಗಳು ಕಳೆದುಹೋದುವು. ಕೊನೆಗೆ ನಮ್ಮ ತಂದೆ ಅವನಿ
ಗೊಂದು ಕಾಗದ ಬರೆದರು—'ಇಷ್ಟು ದಿನ ನಿನ್ನ ಓದಿತ್ತು. ಈಗ ಅದೆಲ್ಲಾ
ತೀರಿ ಕೆಲಸ ಸಂಪಾದಿಸಿರುವೆ. ಇನ್ನಾದರೂ ಆದಷ್ಟು ಬೇಗ ಬಂದು
ಪಾಪನನ್ನು ಕರೆದುಕೊಂಡು ಹೋಗು' ಎಂದು.

"ಒಂದೆರಡು ವಾರಗಳ ತರುವಾಯ ಅವನಿಂದ ಪ್ರತ್ಯುತ್ತರ ಬಂತು—
'ಈಗ ಬರಲು ನನಗೆ ಸಮಯವಿಲ್ಲ. ಮುಂದಿನ ರಜೆಯಲ್ಲಿ ಬರಲು ಯತ್ನಿ
ಸುತ್ತೇನೆ.' ಕೇವಲ ಇಷ್ಟೇ. ತಂದೆ ಕಾಗದ ಓದಿ ನನಗೆ ಕೊಟ್ಟರು.
ನಾನೂ ಓದಿದೆ. ಅದಕ್ಕಿಂತಲೂ ಹೆಚ್ಚೇನು ನಾನವನಿಂದ ಎಣಿಸಿರಲಿಲ್ಲ.
ಆದರೆ ನಮ್ಮ ತಂದೆ—ಅವರ ಮೇಲೆ ಎಲೆಕ್ಟ್ರಿಕ್ ಶಾಕ್‌ನ ಕೆಲಸವನ್ನು
ಆ ಕಾಗದ ಮಾಡಿತ್ತು. ನಮ್ಮ ತಾಯಿ ಸತ್ತಾಗ ಸಹ ಅವರ ಮುಖ

ಹಾಗಾಗಿರಲಿಲ್ಲ. ತಂದೆ–ತಾಯಿಲ್ಲದ ತಬ್ಬಲಿಯನ್ನು ಸಾಕಿ ಮುಂದೆ ತಂದು ಮನುಷ್ಯನನ್ನಾಗಿ ಮಾಡಿದ್ದರು. ತಮ್ಮ ಪ್ರೀತಿಯ ಮಗಳನ್ನು ಕೊಟ್ಟು ಪುರಸ್ಕರಿಸಿದ್ದರು. ಅವರ ಪ್ರತಿಫಲ ಈ ರೀತಿಯಾಗಬಹುದೆಂದು ಅವರು ಕನಸಿನಲ್ಲಿ ಸಹ ಚಿಂತಿಸದ ಮಾತಾಗಿತ್ತು. ಈಗ....?

"ಪಾಪನನ್ನು ನೆನಸಿಕೊಂಡು ಎಂದೂ ಅಳದಿದ್ದ ನಾನೂ ಆ ದಿನ ಚಿಕ್ಕಮಕ್ಕಳಂತೆ ಬಿಕ್ಕಿ ಬಿಕ್ಕಿ ಅತ್ತೆ. ತಲೆ ತಲೆ ಹೊಡೆದುಕೊಂಡೆ. ಅವಳ ಗಂಡನನ್ನು ಕೊಂದೇಬಿಡುತ್ತೇನೆ ಎಂದುಕೊಂಡೆ. ನೆನಸಿಕೊಂಡರೆ ಈಗಲೂ ಹಾಗೆಯೇ ಆಗುತ್ತೆ.

"ಪಾಪ ಕಾಗದ ನೋಡಿದಳು. ನಾವೆಣಿಸಿದಂತೆ ಅವಳು ಅತ್ತು ಕರೆಯಲಿಲ್ಲ. ಬೇರೆ ಯಾವ ವಿಧದಲ್ಲೂ ತಾನು ನೊಂದಿರುವೆನೆಂದು ತೋರ ಗೊಡಲಿಲ್ಲ. ಅವಳ ಶಾಂತತೆಯನ್ನು ನೋಡಿ ನಾಚಿ ನನ್ನನ್ನು ನಾನೇ ಸಂತೈಸಿಕೊಂಡೆ. ಆದರೂ ಒಳಗೊಳಗೇ ಒಂದು ಭಯ; ಯಾರಿಗೂ ಹೇಳದೆ ಎಲ್ಲಾದರೂ ಪಾಪ ಆತ್ಮಹತ್ಯೆ ಮಾಡಿಕೊಂಡರೇನು ಗತಿ? ಈ ವಿಷಯ ದಲ್ಲಿ ಮಾತ್ರ ನನ್ನೂಹೆಯು ತಪ್ಪಾಯ್ತು. ನಾನವಳನ್ನು ಎಡೆಬಿಡದಿರು ವುದನ್ನು ನೋಡಿ ಅವಳು 'ಏನಣ್ಣಾ, ಎಲ್ಲಾದರೂ ಬಾವಿಗೇವಿ ಬಿದ್ದು ಬಿಟ್ಟೇನು ಎಂತ ಭಯವೋ?' ಎಂದು ಒಂದು ಒಣ ನಗು ನಕ್ಕಳು. 'ಹಾಗೇನೂ ಇಲ್ಲ ಪಾಪ–ನೀನೊಬ್ಬಳೇ ಇದ್ದರೆ ಸುಮ್ಮನೆ ಚಿಂತಿಸಿ ಚಿಂತಿಸಿ ನೊಂದುಕೊಳ್ಳುತ್ತಿ' ಎಂತ ಬಾಯಿ–ಹಾರಿಸಿದೆ. 'ನೊಂದು ಕೊಂಡರೆ, ತಾನೆ ಫಲ ಏನು? ಹಾಗೇನಾದರೂ ಫಲಗಿಲ ಇದ್ದಿದ್ದರೆ ಈ ಎರಡು ವರ್ಷಗಳಲ್ಲೇ ಅದೆಲ್ಲಾ ಬರುತ್ತಿತ್ತು' ಎಂದಳು. ಊಹಿಸಿದ್ದರೂ ಗೊತ್ತಿಲ್ಲದವನಂತೆ 'ಎರಡು ವರ್ಷಗಳ ಮೊದಲೇ ಹೀಗಾಗುವುದೆಂದು ನಿನಗೆ ಹೇಗೆ ಗೊತ್ತು ಪಾಪ?' ಎಂದು ಪ್ರಶ್ನಿಸಿದೆ. ಪಾಪ ಎರಡು ವರ್ಷ ಗಳಿಂದಲೂ ಹೇಳದಿದ್ದ ಆ ದಿನದ ಸುದ್ದಿಯನ್ನು ಆಗ ನನಗೆ ಹೇಳಿದಳು. ವಸಂತ, ನಾನು ಊಹಿಸಿದಂತೆ ಆ ದಿನ ಪಾಪ ಅವನನ್ನು 'ಇಂಗ್ಲೆಂಡಿಗೆ ಹೋಗಬಾರದೆಂದು ಪ್ರಾರ್ಥಿಸಿದಳಂತೆ. ಎಷ್ಟಾದರೂ ಹುಡುಗತನ

ನೋಡು! ಹೋಗಲೇಬೇಕು ಎಂದಿದ್ದರೆ ಅವಳೇನೂ ಅಷ್ಟು ನೊಂದು
ಕೊಳ್ಳುತ್ತಿರಲಿಲ್ಲ. ಆದರೆ ಅವನು ಹೇಳಿದ ಮಾತುಗಳು..! 'ಇಂಗ್ಲೆಂಡಿಗೆ
ಹೋಗುವ ಸಲುವಾಗಿಯೋ ನಿನ್ನನ್ನು ಮದುವೆ ಆದೆ-ಇಲ್ಲದಿದ್ದರೆ ಯಾರು
ಮದುವೆ ಆಗುತ್ತಿದ್ದರು ನಿನ್ನ....'. ಪಾಪನ ಆನಂದವನ್ನು ಕೊಂದ
ಮಾತುಗಳವು. ಎರಡು ವರ್ಷಗಳಿಂದಲೂ ಅವಳನ್ನು ಕೊರಗಿಸಿ ಕರಗಿಸಿದ
ಮಾತುಗಳವು. ಆ ಮಾತುಗಳನ್ನವಳು ಮೊದಲೇ ಹೇಳಿದ್ದರೆ..ಅವಳು
ಹೇಳಲಿಲ್ಲ. ಹಾಗೆಲ್ಲಾ ಹೇಳುವಂತಹ ಹುಡುಗಿಯೂ ಅಲ್ಲ ಅವಳು. ಆ
ಮಾತುಗಳನ್ನು ನೆನೆದು ಕಳೆದ ಎರಡು ವರ್ಷಗಳಿಂದ ಪಾಪ ಮಾತ್ರ ಕೊರಗು
ತ್ತಿದ್ದಳು. ಈಗ ನಮ್ಮ ಮನೆಯವರಿಗೆಲ್ಲಾ ಕೊರಗು. ಸ್ವಲ್ಪ ಒರಟು
ಸ್ವಭಾವದವರಾದರೂ ಚಿಕ್ಕಮ್ಮನಿಗೆ ಪಾಪ ಎಂದರೆ ಬಲು ಪ್ರೇಮ.
ಅವರಂತೂ ಅವಳ ಗಂಡನ ವರ್ತನೆಯಿಂದ ಬಹಳ ಸಿಟ್ಟುಗೊಂಡಿದ್ದರು.

"ಪಾಪನ ಗಂಡ ಊರಿಗೆ ಬಂದುದೂ, ಅವನಿಗೆ ಕೆಲಸವಾದುದೂ
ಊರಿಗೆಲ್ಲಾ ತಿಳಿದ ವಿಷಯ. ಇನ್ನೂ ಪಾಪ ಗಂಡನ ಮನೆಗೆ ಹೋಗಿ
ಸಂಸಾರ ಮಾಡುತ್ತಿಲ್ಲವೇಕೆಂದು ನಮ್ಮ ನೆರೆಕರೆಯವರಿಗೆಲ್ಲಾ ಬಹಳ
ಕುತೂಹಲ. ದಿನದಿನವೂ ಚಿಕ್ಕಮ್ಮನೊಡನೆ ಇದೇ ಪ್ರಶ್ನೆ. ಕೇಳಿ ಚಿಕ್ಕಮ್ಮ
ಉರಿದುಬೀಳುತ್ತಿದ್ದರು. ಪಾಪನ ಗೆಳತಿಯರೂ ಅವಳೊಡನೆ ಕೇಳುತ್ತಿದ್ದ
ರೆಂದು ತೋರುತ್ತೆ. ಅವಳು ಗೆಳತಿಯರು ಬಂದರೆಂದರೆ ಕಾಣಿಸಿಕೊಳ್ಳಲು
ಹಿಂಜರಿಯುತ್ತಿದ್ದಳು. ಕಾರಣವಿರಲಿ ಇಲ್ಲದಿರಲಿ—ನಮ್ಮ ಸಮಾಜದಲ್ಲಿ
ಪತಿಯಿಂದ ತಿರಸ್ಕೃತೆಯಾದ ಪತ್ನಿ ಎಂದರೆ ಎಲ್ಲರಿಗೂ ಸಂಶಯ—ಸಮಾ
ಜದ ಕ್ರೂರ ನಾಲಿಗೆ ಪಾಪನನ್ನೂ ಟೀಕಿಸದಿರಲಿಲ್ಲ.

"ಅವನಿಗೆ ಕೆಲಸವಾಗಿ ಏಳೆಂಟು ತಿಂಗಳುಗಳಾಗಿತ್ತು. ಒಂದು ದಿನ
ಸಾಯಂಕಾಲ ನಾನು ಮನೆಗೆ ಬರುವಾಗ ಪಾಪ ನನ್ನ ರೂಮಿನಲ್ಲಿ ಕೂತಿ
ದ್ದಳು. ಸಾಯಂಕಾಲದ ಹೊತ್ತಿನಲ್ಲಿ ನನ್ನ ರೂಮಿಗವಳು ಬರುವುದು
ಅಪರೂಪ. ಇಂದೇನು ಹೊಸತು ಎಂದು 'ಏನು ಪಾಪ?' ಎಂದೆ. ಆಗ
ರೂಮಿನಲ್ಲಿ ದೀಪವಿನ್ನೂ ಹತ್ತಿಸಿರಲಿಲ್ಲ. ಸಂಪೂರ್ಣ ಕತ್ತಲೆಯಾಗದಿದ್ದರೂ
ಆ ಮಸುಕು ಬೆಳಕಿನಲ್ಲವಳ ಮುಖವೂ ಸರಿಯಾಗಿ ಕಾಣಿಸುತ್ತಿರಲಿಲ್ಲ.

ಆದರೂ ಅವಳ ದನಿಯಿಂದ ತಿಳಿದುಕೊಂಡೆ, ಬಹಳ ಅತ್ತಿರುವಳೆಂದು. ಅದೇ ಅವಳ ಹತ್ತಿರ ಕೂತು ಕೈ ಹಿಡಿದು 'ಸುಮ್ಮನೆ ಅತ್ತರೇನು ಬಂದಂತಾಯಿತು ಪಾಪ? ನಿನ್ನ ಆರೋಗ್ಯ ಹಾಳು ಮಾಡಿಕೊಳ್ಳುತ್ತಿ, ಅಷ್ಟೆ. ನಿನ್ನ ಕಣ್ಣೀರಿನ ಒಂದು ಹನಿಯಷ್ಟು ಯೋಗ್ಯತೆ ಸಹ ಇಲ್ಲ ಆ ಪ್ರಾಣಿಗೆ' ಎಂದು ಏನೇನೋ ಹೇಳಿ ಸಮಾಧಾನ ಪಡಿಸಲೆತ್ನಿಸಿದೆ. ಸಮಾಧಾನ ಹೊಂದುವುದರ ಬದಲು ಅವಳ ಅಳು ಇನ್ನಷ್ಟು ಜೋರಾಯ್ತು. ಅಳುತ್ತಲೇ 'ಅಣ್ಣ, ನೀನೇ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟುಬಿಡು ನನ್ನ' ಎಂದಳು.

"ಪಾಪನ್ನ ಒತ್ತಾಯದಿಂದ ಅವನೆಡೆಗೆ ನೂಕುವುದೇ! ಅವನಿಗವಳು ಬೇಡವಾಗಿದ್ದರೂ ನಮಗೆ ಹೆಚ್ಚಾಗಿರಲಿಲ್ಲ. ಅವಳ ಮಾತುಗಳನ್ನು ಕೇಳಿ ನನಗೇನೋ ಊಹಿಸಲಾರದಷ್ಟು ಆಶ್ಚರ್ಯ, ಜೊತೆಯಲ್ಲೇ ಕೋಪ. ಎಲ್ಲಾದರೂ ಬೇಕುಬೇಕೆಂತಲೇ ನರಕಕ್ಕೆ ನೂಕುವುದಿದೆಯೆ ನಮ್ಮ ಪಾಪನ್ನ! ಆದರೆ ಪಾಪ ನನ್ನ ಯಾವ ಮಾತನ್ನೂ ಕೇಳಲಿಲ್ಲ. ಕಳುಹಿಸಿಯೇ ಬಿಡಬೇಕೆಂದು ಹಠಹಿಡಿದಳು. ತಂದೆ, ನಾನು ಅಲ್ಲದೆ ಚಿಕ್ಕಮ್ಮ ಸಹ ಇದನ್ನು ವಿರೋಧಿಸಿದರೂ ಕೊನೆಗೆ ಪಾಪನ ಹಠವೇ ಗೆದ್ದಿತು. ಅವಳನ್ನವನ ಮನೆಗೆ ಕರೆದುಕೊಂಡು ಹೋಗಿ ಬಿಡುವ ಭಾರವೂ ನನ್ನ ಮೇಲೆ ಬಿತ್ತು.

"ವಸಂತ, ಗಂಡ ಒಳ್ಳೆಯವನಾಗಿ, ಹೆಂಡತಿ ಅವನ ಪ್ರೇಮಕ್ಕೆ ರಾಣಿಯಾಗಿರುವಾಗ ಸಹ ಹೆಣ್ಣುಮಕ್ಕಳನ್ನು ಅತ್ತೆಯ ಮನೆಗೆ ಕಳುಹಲು ಹೆತ್ತವರು ನೊಂದುಕೊಳ್ಳುವರು. ಇನ್ನು ನಮ್ಮ ಪಾಪನನ್ನು, 'ನಮ್ಮ ಮನೆ ಬೆಳಕನ್ನು' ಬೇಡವಾದ ಆ ಗಂಡನ ಮನೆಗೆ ಬಲಾತ್ಕಾರದಿಂದ ಕಳುಹಲು ನಮಗೆಲ್ಲಾ ದುಃಖವಾಯಿತೆಂದು ಬೇರೆ ಹೇಳಬೇಕೆ?— ಸಾವನ್ನು ಹಿಂಬಾಲಿಸುವ ದುಃಖಿಗಳಂತೆ ಸ್ಟೇಶನ್ ತನಕ ಮನೆಯವರೆಲ್ಲಾ ನಮ್ಮೊಡನೆ ಬಂದರು. ಆ ದಿನವನ್ನು ಹೇಗೆ ಮರೆಯಲಿ ವಸಂತ? ಕಣ್ಣೀರು ತುಂಬಿ ಸುರಿಯುತ್ತಿದ್ದ ಕಣ್ಣುಗಳಿಂದ ನನ್ನ ಪುಟ್ಟ ತಂಗಿ

ಕಂ
ಬ
ನಿ

ನಿಲ್ದಾಣದಲ್ಲಿ ನಿಂತಿದ್ದ ತಂದೆಯನ್ನು ಕಣ್ಮರೆಯಾಗುವ ತನಕ ನೋಡುತ್ತಿದ್ದಳು. ಕೊನೆಗವರು ಕಣ್ಮರೆಯಾದ ಮೇಲೆ ಒಂದು ಮೂಲೆಗೆ ಹೋಗಿ ಕೂತವಳು ಆ ಊರು ಬರುವ ತನಕ ಒಂದೇ ಒಂದು ಮಾತು ಸಹ ಆಡಲಿಲ್ಲ. ನಾನೂ ಮಾತಾಡಿಸುವ ಪ್ರಯತ್ನ ಮಾಡಲಿಲ್ಲ.

"ಆ ಊರು ಬಂತು ವಸಂತ. ನಾವು ರೈಲಿನಿಂದಿಳಿದು ಒಂದು ಕಾರು ಮಾಡಿಕೊಂಡು ಅವನ ಮನೆಗೆ ಹೊರಟೆವು. ನಾವು ಬರುವ ವಿಷಯ ನನ್ನವನಿಗೆ ತಿಳಿಸಿದ್ದರೂ ಅವನೇನೂ ಸ್ಟೇಶನ್ನಿಗೆ ಬಂದಿರಲಿಲ್ಲ. ಬರುವನು ಎಂದು ನಾವು ಎಣಿಸಿಯೂ ಇರಲಿಲ್ಲ. ಅದೊಂದು ಆದಿತ್ಯವಾರ—ಅವನಿಗೆ ರಜವಿದ್ದ ದಿನ. ನಾವು ಅಲ್ಲಿಗೆ ಹೋಗುವಾಗ ಸುಮಾರು ಹತ್ತುಗಂಟೆ ಇರಬಹುದು. ಅವನು ಇದಿರಿನ ಹಾಲಿನಲ್ಲಿ ಒಂದು ಈಸೀಚೇರಿನ ಮೇಲೆ ಬಿದ್ದುಕೊಂಡು ಹಿಂದಿನ ದಿನದ ಪೇಪರ್ ತಿರುವಿಹಾಕುತ್ತಿದ್ದ. 'God is in his heaven & all is right with world' ಎಂದು ಹೇಳುವಂತಿತ್ತು ಅವನ ರೀತಿ. ನೋಡಿದೊಡನೆಯೇ ಬಿದ್ದಲ್ಲಿಗೇ ಒದೆಯಲೇ ಎನ್ನುವಷ್ಟು ಕೋಪ ಬಂದರೂ ಪಾಪನ ಮುಖನೋಡಿ ನುಂಗಿಕೊಂಡೆ.

"ಬಾಗಿಲ ಹತ್ತಿರ ನಿಂತಿದ್ದ ಪಾಪನನ್ನು ನೋಡಿದರೂ ನೋಡದವನಂತೆ 'ಏನು ಮಹೇಶ?' ಎಂದು ಬಿದ್ದಲ್ಲಿಂದಲೇ ಕೇಳಿದ. ಉಕ್ಕುತ್ತಿದ್ದ ಕೋಪವನ್ನು ತಡೆದುಕೊಂಡು 'ನಿನ್ನ ಹೆಂಡತಿಯನ್ನು ಕರೆದುಕೊಂಡು ಬಂದಿದ್ದೇನೆ' ಎಂದು ಹೇಳಿದೆ. 'ಅದಕ್ಕೆಷ್ಟೊಂದು ಅವಸರವೇನಿತ್ತು? ನಾನೇ ರಜೆಯಲ್ಲಿ ಬರುವೆನೆಂದು ಬರೆದಿದ್ದೆನಲ್ಲ' ಎಂದು ಕೇಳಿದ. 'ಎರಡು ಮೂರು ರಜೆಗಳು ಬಂದು ಹೋದರೂ ನೀನು ಬರಲಿಲ್ಲ. ಆದರೂ ಪಾಪ ನಮಗೇನೂ ಹೆಚ್ಚಾಗಿರಲಿಲ್ಲ. ಅವಳನ್ನು ಕಳುಹಿಸಲು ನಮಗೆ ಅವಸರವೂ ಇರಲಿಲ್ಲ. ಅವಳ ಹಠ ತಡೆಯಲಾರದೆ ಕರೆದುಕೊಂಡು ಬಂದಿದ್ದೇನೆ. ಇನ್ನವಳನ್ನು ನೋಡಿಕೊಳ್ಳುವ ಭಾರ ನಿನ್ನದು—' ಎಂದು ಅವಳನ್ನು ಆ ಪ್ರಾಣಿಗೆ ಒಪ್ಪಿಸಿದೆ.

"ನನ್ನ ಮಾತನ್ನು ಕೇಳಿ ಅವನು ಸ್ವಲ್ಪ ಹೊತ್ತು ಸುಮ್ಮನಿದ್ದ. ಮತ್ತೆ 'ಕೂತುಕೋ ಮಹೇಶ, ನಿನ್ನೊಡನೆ ಸ್ವಲ್ಪ ಮಾತಾಡಬೇಕಾಗಿದೆ.

ನೀವು ಇಷ್ಟೊಂದು ಅವಸರ ಮಾಡದಿದ್ದರೆ ನಾನೇ ಅಲ್ಲಿಗೆ ಬಂದು ಎಲ್ಲಾ ಹೇಳುತ್ತಿದ್ದೆ' ಎಂದ. ಅಷ್ಟು ಹೊತ್ತೂ ನಾನೂ ಪಾಪನೂ ನಿಂತೇ ಇದ್ದೆವು. ಅವನು ಹಾಗೆಯೇ ಬಿದ್ದುಕೊಂಡಿದ್ದ. ನನ್ನನ್ನು ಕೂರಲು ಹೇಳಿದೊಡನೆ ನಾನು ಕೂತುಕೊಳ್ಳುತ್ತಾ ಬಾಗಿಲ ಹತ್ತಿರ ನೀರವವಾಗಿ ನಿಂತಿದ್ದ ಪಾಪನ್ನ ಕೂಗಿ 'ಬಾ, ಇಲ್ಲಿ ಕೂತುಕೋ' ಎಂದೆ. ಅವಳು ಬರಲಿಲ್ಲ; ಅಲ್ಲೇ ನಿಂತಿದ್ದಳು.

"ಅದನ್ನು ಲಕ್ಷಿಸದೆ ಅವನು 'ನೋಡು ಮಹೇಶ, ನಿನ್ನ ತಂಗಿಯನ್ನು ಮದುವೆಯಾದಾಗ ನಾನಿನ್ನೂ ಚಿಕ್ಕವನು. ಸೋದರ ಮಾವನ ಮಾತನ್ನು ಮೀರಲಾರದೆ ಮದುವೆಯಾದೆ. ಆಗ ನನ್ನ ಮನಸ್ಸೇ ನನಗೆ ತಿಳಿದಿರಲಿಲ್ಲ. ಈಗ ನೋಡು, ನಾನೂ ಒಬ್ಬ ಮನುಷ್ಯನಾಗಿದ್ದೇನೆ; ನನಗೂ ಬುದ್ಧಿಯಿದೆ, ಆತ್ಮವಿದೆ. ನನಗೆ ಬುದ್ಧಿ ಬರುವ ಮೊದಲು ಆದ ಒಂದು ವಿಷಯಕ್ಕಾಗಿ ಇಡೀ ಜೀವನವನ್ನೆಲ್ಲಾ ನಾನೇಕೆ ಹಾಳುಮಾಡಿಕೊಳ್ಳಬೇಕು? ಒತ್ತಾಯದ ಮದುವೆ ಏನೋ ಎಂದೋ ನಡೆದುಹೋಯಿತು. ಈಗೇನು ಮಾಡುವಂತೆಯೂ ಇಲ್ಲ. ಈಗ ನಾನೊಂದು ನಿಶ್ಚಯಮಾಡಿದ್ದೇನೆ. ನಿನ್ನ ತಂಗಿ ನಿಮ್ಮನೆಯಲ್ಲೇ ಇರಲಿ. ನಾನವಳ ಖರ್ಚಿಗೆ ಬೇಕಾಗುವ ಹಣವನ್ನು ಕೊಡಲು ತಯಾರಾಗಿದ್ದೇನೆ. ಇದಕ್ಕೂ ಹೆಚ್ಚಾಗಿ ನಾನಿನ್ನೇನು ಹೇಳಲಿ?' ಎಂದು ಹೇಳಿದ.

"ಅಷ್ಟು ಹೊತ್ತೂ ತಡೆದಿದ್ದ ಕೋಪ ಅವನ ಮಾತು ಕೇಳಿ ಉಕ್ಕಿ ಬಂತು. 'ಪಾಪನ ಖರ್ಚನ್ನು ಪೂರೈಸಲಾರದೆ ಅವಳನ್ನಿಲ್ಲಿ ಬಿಡಲು ಕರೆತರಲಿಲ್ಲ. ನಿನಗೆ ಅವಳು ಬೇಡವಾದರೆ, ಅವಳ ಹಣದಿಂದ ವಿದ್ಯೆಗಳಿಸಿ ಸಂಪಾದಿಸಿದ ನಿನ್ನ ಹಣವೂ ಅವಳಿಗೆ ಬೇಡ' ಎಂದು 'ಬಾ ಪಾಪ, ಇಲ್ಲಿ ನಮಗಿನ್ನೇನು ಕೆಲಸ' ಎಂದು ಹೊರಟೆ. ಅವನೂ ತಡೆಯಲಿಲ್ಲ. ಬಹಳ ಸುಲಭವಾಗಿ ಗೆದ್ದೆ ಎಂದು ಹಿಗ್ಗುತ್ತಿದ್ದನೋ ಏನೋ! ಪಾಪ ಬಾಗಿಲ ಹತ್ತಿರದಿಂದ ಕದಲಲಿಲ್ಲ. ನಾನು ಹತ್ತಿರ ಹೋಗಿ ಕೈ ಹಿಡಿದು 'ಬಾ, ಪಾಪ, ನೀನು ನಮಗೇನೂ ಹೆಚ್ಚಾಗಿಲ್ಲ. ಬಾ, ಹೋಗೋಣ' ಎಂದೆ. ಪಾಪ ಕೈ ಕೊಸರಿಕೊಂಡು ಅವನೆಡೆಗೆ ಹೋಗಿ, ಅವನ ಕಾಲುಗಳನ್ನು ಕಣ್ಣೀರಿನಿಂದ

೪೦ ಬ ನಿ

ತೊಳೆಯುತ್ತಾ 'ಹೆಂಡತಿಯಾಗಿ ನಾನು ನಿಮಗೆ ಬೇಡವಾಗಿದ್ದರೂ ಸೇವಕಿ ಯಂತೆ ಇರಲಾದರೂ ಒಂದಿಷ್ಟು ಸ್ಥಳ ಕೊಡಿ' ಎಂದು ಪ್ರಾರ್ಥಿಸಿದಳು. ಅವಳ ಪ್ರಾರ್ಥನೆಗಾದರೂ ಅವನ ಕಲ್ಲುಹೃದಯ ಕರಗುತ್ತಿತ್ತೇನೋ ! ಆದರೆ ಆಗಲೇ ನವೀನ ಉಡಿಗೆತೊಡಿಗೆಗಳಿಂದ ಅಲಂಕೃತಳಾದ ರಮಣಿ ಯೊಬ್ಬಳು ಕೈಯ್ಯಲ್ಲೊಂದು ಟೆನ್ನಿಸ್ ರ್ಯಾಕೆಟ್ ಹಿಡಿದು ಸಹಜವಾದ ಸಲಿಗೆಯಿಂದ ಒಳಗೆ ಬಂದಳು. ಹೊರಗಿನ ಬಿಸಿಲಿನಿಂದ ಬಂದುದರಿಂದ ಒಳಗಿದ್ದ ನಮ್ಮಿಬ್ಬರನ್ನು ಅವಳು ನೋಡಿದಂತೆ ತೋರಲಿಲ್ಲ. ಬಿದ್ದು ಕೊಂಡಿದ್ದ ಅವನು ಅವಳನ್ನು ನೋಡಿ ಕಾಲು ಕೊಸರಿಕೊಂಡು ಎದ್ದು ನಿಂತ—ಪಾಪನೂ ಎದ್ದುನಿಂತಳು. ಆಗ ಅವಳು ನನ್ನನ್ನೂ ಪಾಪನನ್ನೂ ನೋಡಿದಳು. ಆಶ್ಚರ್ಯದಿಂದ ಅವನ ಮುಖವನ್ನು ನೋಡಿದ ಅವಳ ನೋಟವು 'ಯಾರಿವರು ?' ಎಂದು ಪ್ರಶ್ನಿಸುವಂತಿತ್ತು. ನನ್ನ ತಂಗಿ ಯನ್ನು ಅಪಮಾನಿಸಿದ ಅವನು ನನ್ನ ಕಡೆ ತಿರುಗಿ, ಆ ಬಂದವಳ ಕೈ ಹಿಡಿದು 'ಮಹೇಶ, ಇವಳು ನನ್ನ ಹೆಂಡತಿ ಮಾಲತಿ' ಎಂದ. ಅವಳು ಒಳಗೆ ಬಂದಂದಿನಿಂದ ಭ್ರಾಂತಳಂತೆ ನಿಂತಿದ್ದ ಪಾಪ ಅವನ ಮಾತು ಕೇಳಿ, ಹಿಂದಿ ರುಗಿ ಸಹ ನೋಡದೆ ಹೊರಗೆ ನಡೆದುಬಿಟ್ಟಳು. ನಾನೂ ಮರುಮಾತಾ ಡದೆ ಮಂತ್ರಮುಗ್ಧನಂತೆ ಅವಳನ್ನು ಹಿಂಬಾಲಿಸಿದೆ.

"ಇದೆಲ್ಲಾ ನಡೆದೀಗ ಎರಡು ಮೂರು ವರ್ಷಗಳಾಗಿ ಹೋದುವು. ಮೊದಮೊದಲು ನಾವೆಲ್ಲಾ ಪಾಪನ ಆಸೆಯನ್ನು ಬಿಟ್ಟುಬಿಟ್ಟಿದ್ದೆವು. ವಸಂತ, ಡಾಕ್ಟರು ಸಹ ಅವಳು ಬದುಕಲಾರಳು ಎಂದಂದಿದ್ದರು. ಆದರೂ ಕೊನೆಗವಳು ಬದುಕಿಬಿಟ್ಟಳು. ಅವಳ ಆರೋಗ್ಯವೂ ಸುಧಾರಿಸಿತು. ಆದರೆ ಅವಳಮುಖದಲ್ಲಿ ಸದಾ ಮಿಂಚುತಿದ್ದ ನಗುಮಾತ್ರ 'ಎಂದೆಂದಿಗೂ ಹಿಂದಿ ರುಗೆ'ನೆಂದು ಹೊರಟೇಹೋಯ್ತು. ನನ್ನ ತಂಗಿ ಸುಂದರಿಯಲ್ಲ ವಸಂತ, ಏನೋ ಎಲ್ಲರಂತಿದ್ದಾಳೆ ಅಷ್ಟೆ. ಆದರೆ ಬುದ್ಧಿ, ಗುಣ, ನಡತೆಗಳಲ್ಲಿ ಅವ ಳನ್ನು ಸರಿಗಟ್ಟುವವರು ಅಪರೂಪ. ತನ್ನಿಂದಾಗಿ ನಾವೆಲ್ಲಾ ನೊಂದು ಕೊಳ್ಳಬಾರದೆಂದು ಅವಳು ತನ್ನ ದುಃಖವನ್ನು ನುಂಗಿಕೊಂಡು ಮನೆ ಯಲ್ಲಿ ಓಡಾಡುತ್ತಿದ್ದಳು. ಆ ದಿನದ ತರುವಾಯ ಎಂದೂ ಅವಳತ್ತುದನ್ನು

ನಾನು ನೋಡಲಿಲ್ಲ. ಗಂಡನಿದ್ದರೂ ವಿಧವೆಯಂತೆ ಬಾಳುತ್ತಿದ್ದ ಪಾಪನ ಅವಸ್ಥೆಗೆ ಕೊರಗಿ ಕೊರಗಿ ಒಂದು ವರ್ಷ ತುಂಬುವ ಮೊದಲೇ ನಮ್ಮ ತಂದೆ ಅಮ್ಮನ ದಾರಿ ಹಿಡಿದರು. ಮತ್ತೊಂದು ತಿಂಗಳಾಗುವುದರೊಳಗೆ ಮೊದಲೇ ಹೃದ್ರೋಗವಿದ್ದ ಚಿಕ್ಕಮ್ಮನೂ ಅವರನ್ನು ಹಿಂಬಾಲಿಸಿದರು. ಉಳಿದವರು ನಾನು—ಪಾಪ ; ಪಾಪ—ನಾನು.

"ಇದೇ ಸಮಯದಲ್ಲಿ ನಮ್ಮ ಆರ್ಥಿಕ ಸ್ಥಿತಿಯ ಅನುಭವವೂ ಆಯ್ತು. ಪಾಪನ ಗಂಡನ ವಿಲಾಯತಿಯ ಓದಿಗಾಗಿ ಮಾಡಿಟ್ಟಿದ್ದ ಸಾಲಕ್ಕೆ ಮನೆ ಹೊಲ ಎಲ್ಲಾ ಮಾರಾಟವಾಯ್ತು. ಉಳಿದುದು ಅದೇ ವರ್ಷ ನನಗೆ ದೊರೆತ ಬಿ. ಎ. ಡಿಗ್ರಿ ಒಂದು. ನಮ್ಮ ತಂದೆ ಬದುಕಿದ್ದರೆ ನಾನು ಮೆಡಿಕಲ್ ಕಾಲೇಜು ಸೇರುತ್ತಿದ್ದೆ. ಅವರ ಮರಣದಿಂದ ಓದುವ ಹಂಬಲವೆಲ್ಲಾ ಮೂಲೆಪಾಲಾಗಿ ಹೊಟ್ಟೆಯ ಹಂಬಲ ಒಂದೇ ಉಳಿಯಿತು. ವಸಂತ, ನಮ್ಮ ಆ ಕಷ್ಟದ ದಿನಗಳಲ್ಲಿ ಪಾಪನ ಸಹನಶೀಲತೆ, ಶಾಂತತೆ, ತನ್ನನ್ನು ಮರೆತು ನನಗಾಗಿ ದುಡಿಯುವ ಅವಳ ಶಕ್ತಿ ಎಲ್ಲಾ ನೆನಸಿ ಕೊಂಡರೆ ನನ್ನ ಪುಟ್ಟ ತಂಗಿಯಲ್ಲಿ ಇಷ್ಟೊಂದು ಶಕ್ತಿ ಎಲ್ಲಿ ಅಡಗಿತ್ತು ಎಂದು ಈಗಲೂ ನನಗೆ ಆಶ್ಚರ್ಯವಾಗುತ್ತದೆ.

'ಕೆಟ್ಟು ಪಟ್ಟಣ ಸೇರು' ಎಂದು ಒಂದು ಗಾದೆಯಿದೆ ವಸಂತ. ನಾವೂ ಊರು ಬಿಡುವುದು ಎಂದು ನಿಶ್ಚಯಿಸಿದೆವು. ಆ ಊರಲ್ಲಿ ನಮ್ಮದೆನ್ನಲು ಏನೂ ಇರಲಿಲ್ಲ. ಮತ್ತೆ ಪಾಪನ ದುರವಸ್ಥೆಯನ್ನು ಕುರಿತು ಟೀಕಿಸುವವರ ಮುಂದೆ ಯಾವ ಆಸೆಗಾಗಿ ಇರಬೇಕು ಹೇಳು. ನಮ್ಮೂರನ್ನು ಬಿಡುವ ಹಿಂದಿನ ದಿವಸ ಒಂದು ಸಾರ್ವಜನಿಕ ಸಭೆ ಕೂಡಿತ್ತು. ಇದ್ದ ಸ್ವಲ್ಪ ಸಾಮಾನುಗಳನ್ನೆಲ್ಲಾ ಕಟ್ಟಿ ಮುಗಿಸಿದ್ದ ನಾವು ಬೇರೇನೂ ಕೆಲಸವಿಲ್ಲದುದರಿಂದ ಆ ಸಭೆಗೆ ಹೋದೆವು. ಸಭೆ ಸುರು ವಾಗುವ ಮೊದಲು 'ವಂದೇ ಮಾತರಮ್' ಹಾಡಬೇಕಾದ ಹುಡುಗಿ ಅದೇಕೋ ಬಂದಿರಲಿಲ್ಲ. ನಮ್ಮ ಪಾಪನಿಗೆ ಬಹಳ ಚೆನ್ನಾಗಿ ಹಾಡಲು ಬರುತ್ತೆ. ಅವಳ ಸಂಗೀತದ ಸಲುವಾಗಿ ನಮ್ಮ ತಂದೆ ಬಹಳ ಮುತುವರ್ಜಿ ವಹಿಸಿದ್ದರು. ಅದು ಆ ಸಭೆಯ ಕಾರ್ಯದರ್ಶಿಗಳಿಗೆ ತಿಳಿದ ವಿಷಯ.

ಕ:ಬನಿ

ಪಾಪನೊಡನೆ ಆ ಹಾಡು ಹಾಡಬೇಕಾಗಿ ಕೇಳಿಕೊಂಡರು. 'ಆಗದು' ಎನ್ನುವಂತಿರಲಿಲ್ಲ. ಅಂದಿನ ಸಭೆಯಲ್ಲವಳು 'ವಂದೇ ಮಾತರಂ' ಹಾಡುವಾಗ ಸಭೆಗೆಸಭೆಯೇ ಸ್ತಬ್ಧವಾಗಿ ಹೋಗಿತ್ತು. ಅವಳ ಕಂಠ ಅಷ್ಟೊಂದು ಮಧುರ, ಹೇಳುವ ರೀತಿ ಅಷ್ಟೊಂದು ಮೋಹಕ—ಮತ್ತೆ ಹಾಡಿದ ಹಾಡು **ವಂದೇ ಮಾತರಮ್**.

"ವಸಂತ, ಅಂದಿನ 'ವಂದೇ ಮಾತರಮ್' ನನ್ನ ತಂಗಿಯ ಜೀವನವನ್ನು ಸಂಪೂರ್ಣವಾಗಿ ಮಾರ್ಪಡಿಸಿಬಿಟ್ಟಿತು. ಎರಡು ಮೂರು ವರ್ಷಗಳ ಕೆಳಗವಳು ಪತಿಯಿಂದ ಪರಿತ್ಯಕ್ತೆಯಾದ ಪಾಪನಾಗಿದ್ದಳು. ಈಗ! ಈಗವಳು ಸುಪ್ರಸಿದ್ಧ ಸಿನಿಮಾ ನಟಿ ಮಿಸ್. ಅರುಣಾ ದೇವಿ! ಇಡೀ ಭಾರತದ ಮೂಲೆ ಮೂಲೆಗಳಲ್ಲಿ ಸಹ ಅವಳ ಸ್ವರ್ಗೀಯ ಸಂಗೀತ ಕೇಳದ, ಅವಳ ಆ ಅಪೂರ್ವ ನಟನೆಯನ್ನು ನೋಡದ ಜನರಿಲ್ಲ. ಜಗತ್ತಿನ ದೃಷ್ಟಿಯಿಂದ ಅವಳಿಷ್ಟು ಸುಖಿ! ವಸಂತ, ಅವಳಿಗೆ ಸುಖವಾಗಲೀ, ಶಾಂತಿಯಾಗಲೀ ಇಲ್ಲವೆಂದು ತಿಳಿದ ಪ್ರಾಣಿ ನಾನೊಬ್ಬ. ಅವಳಿಗೀಗ ಸುಖವೆಂದರೆ ನನ್ನ ಶಿಕ್ಷಣ. ನನಗವಳ ಹಣದಿಂದ ಓದುವ ಇಚ್ಛೆ ಇಲ್ಲದಿದ್ದರೂ ಅವಳ ಹಠದ ಮುಂದೆ ನನ್ನದೇನೂ ನಡೆಯುವಂತಿಲ್ಲ.

"ವಸಂತ, ಜನರ ದೃಷ್ಟಿಯಲ್ಲಿ ಮೊದಲೇ ಪತಿಯಿಂದ ಪರಿತ್ಯಕ್ತೆಯಾಗಿದ್ದ ಪಾಪ, ಈಗ ಸಿನಿಮಾ ನಟಿ—! ಸಿನಿಮಾ ನಟಿ!! ನಮ್ಮವರಿಗೆ ಪತಿತರು, ಚರಿತ್ರಹೀನರು ಎನ್ನುವುದಕ್ಕೆ ಇದಕ್ಕಿಂತಲೂ ಹೆಚ್ಚಿಗಿನ್ನೇನು ಬೇಕು ವಸಂತ?

"ವಸಂತ, ನೀನು ನನ್ನೊಡನೆ ನೋಡಿದ ಆ ಹುಡುಗಿ ನನ್ನ ತಂಗಿ ಪಾಪ. ಅವಳ ಅಥವಾ ನನ್ನ ವಿಷಯ ಜನರೇನಾದರೂ ಅಂದುಕೊಳ್ಳಲಿ ವಸಂತ. ಅದರಿಂದ ನಮಗೆ ಬಾಧಕವಿಲ್ಲ. ಆದರೆ ನೀನು—ನೀನು ಮಾತ್ರ ಜನರ ಕಣ್ಣುಗಳ ಮೂಲಕ ನಮ್ಮನ್ನು ನೋಡದಿದ್ದರೆ ಸರಿ. ಅದಕ್ಕಿಂತ ಹೆಚ್ಚು ಇನ್ನೇನೂ ನಿನ್ನಿಂದ ಬಯಸುವುದಿಲ್ಲ ವಸಂತ. ಪಾಪನ ವಿನಹ ನೀನಲ್ಲದೆ ಈ ಜಗತ್ತಿನಲ್ಲಿ ನನ್ನವರೆನ್ನಲು ನನಗಿನ್ನು ಯಾರೂ ಇಲ್ಲ. ನೀನು

ನನ್ನ ವಿಷಯದಲ್ಲಿ ತಪ್ಪು ಅಭಿಪ್ರಾಯವಿಟ್ಟುಕೊಳ್ಳುವುದನ್ನು ನಾನು ಸಹಿಸಲಾರೆ. ಅದರಿಂದಲೇ ಬೇರೆಯವರೊಡನೆ ಹೇಳಲು ಹಿಂಜರಿಯುವ ಈ ವಿಷಯಗಳನ್ನೆಲ್ಲಾ ನಿನಗೆ ಬರೆದಿರುವೆನು. ನೀನಿದನ್ನು ಓದಿದ ಮೇಲೂ ನನ್ನ ವಿಷಯದ ನಿನ್ನ ಭಾವನೆಯು ಬದಲಾಗದಿದ್ದರೆ ಇದೇ ನಿನಗೆ ನನ್ನ ಕೊನೆಯ ನಮಸ್ಕಾರ—

ಮಹೇಶ.”

ಮಧ್ಯರಾತ್ರಿಯಾಗಿದೆ ಎಂಬ ಅರಿವು ಸಹ ಇಲ್ಲದೆ ತನ್ನ ಕಣ್ಣೀರಿನಿಂದ ತೋಯ್ದ ಕಾಗದವನ್ನು ಕೈಯ್ಯಲ್ಲಿ ಹಿಡಿದುಕೊಂಡೇ ವಸಂತ ಮಹೇಶನ ರೂಮಿಗೆ ಓಡಿದ.

ಏಪ್ರಿಲ್ ೧೯೬೮

# ಮನುವಿನ ರಾಣಿ

ನನಗೆ ಆ ಊರಿಗೆ ವರ್ಗವಾಗಿ ಬರೇ ಎರಡು ತಿಂಗಳುಗಳಾಗಿದ್ದುವು, ಅಷ್ಟೆ. ಆದಿನ ನನಗೆ ತುಂಬಾ ಕೆಲಸವಿತ್ತು. ಬೆಳಗ್ಗೆ ಆರು ಗಂಟೆಗೆ ಹೋದವನು ಅದೇ ಆಗ ಮನೆಗೆ ಬಂದಿದ್ದೆ. ನಾನು ಮನೆಯ ಮೆಟ್ಟಿಲುಗಳನ್ನು ಹತ್ತುವಾಗ ಆಸ್ಪತ್ರೆಯ ಗಡಿಯಾರವು ಹನ್ನೊಂದು ಹೊಡೆಯಿತು. ಮಕ್ಕಳೂ ಕೆಲಸದವರೂ ಮಲಗಿ ನಿದ್ರೆಮಾಡಿಬಿಟ್ಟಿದ್ದರು. ಪಾರ್ವತಿ ಮಾತ್ರ ನನ್ನ ಪ್ರತೀಕ್ಷೆಯಲ್ಲೇ ಕೂತಿದ್ದಳು. ಒಳಗೆ ಹೋಗಿ ಬಟ್ಟೆಬದಲಾಯಿಸಿ ಕೈಕಾಲು ತೊಳೆದು ಇನ್ನೇನು ಊಟಕ್ಕೆ ಕೂರಬೇಕು; ಅಷ್ಟರಲ್ಲಿ ಮುಂಬಾಗಿಲನ್ನು ತಟ್ಟುವ ಶಬ್ದ ಕೇಳಿಸಿತು. ಪಾರ್ವತಿಗೆ ರೇಗಿ ಹೋಯ್ತು: 'ಥೂ, ಇದೇನಿದು ಬೆಳಗಿನ ಜಾವಕ್ಕೆ ಹೋದವರು ಈಗ ಬಂದಿದ್ದಾರೆ. ಬಂದಿಷ್ಟು ಊಟ ಮಾಡುವುದಕ್ಕೂ ಪುರಸೊತ್ತಿಲ್ಲ-ಅಷ್ಟರಲ್ಲಿ ಬಂದರು ಇನ್ನೊಬ್ಬರು. ಕದ ತಟ್ಟುತ್ತಿರಲಿ; ನಾನೇನೂ ಬಾಗಿಲು ತೆರೆಯುವುದಿಲ್ಲ' ಎಂದಳು. ಹೌದು–ನಾನು ಬೆಳಗಿನಿಂದಲೂ ಹಸಿದಿದ್ದೆ. ಆದರೆ... ಆದರೆ ನನಗೆ ಮನಸ್ಸು ತಡೆಯಲಿಲ್ಲ. 'ಹೋಗಲಿ ಬಿಡು ಪಾರ್ವತಿ, ಬಾಗಿಲು ತೆರೆದು ಯಾರೆಂದು ವಿಚಾರಿಸು' ಎಂದೆ. ಅವಳಿಗೆ ಇನ್ನಷ್ಟು ಕೋಪ ಬಂತು: 'ನಿಮ್ಮ ದಮ್ಮಯ್ಯ, ಬೆಳಗಿನಿಂದಲೂ ಹೊಟ್ಟೆಗೇನೂ ಇಲ್ಲ. ಮೊದಲು ಊಟ ಮಾಡಿ; ಆಮೇಲೆ ನೋಡೋಣ' ಎಂದಳು. ಈ ಮಧ್ಯೆ ಬಾಗಿಲ ತಟ್ಟುವುದು ಬಹಳ ಜೋರಾಯ್ತು. ಮನುಷ್ಯ ಪ್ರಾಣಿಯೊಂದು ಜೀವನ ಮರಣಗಳ ಮಧ್ಯೆ ಹೋರಾಡುತ್ತಿರುವಾಗ ನಾನು

ಊಟ ಮಾಡುತ್ತ ಕೂತಿರಲೆ? ಎದ್ದು ನಾನೇ ಕದ ತೆರೆಯಲು ಹೋದೆ. ಪಾರ್ವತಿಯ ಕಣ್ಣುಗಳಲ್ಲಿ ನೀರು ತುಂಬಿತು. 'ನಮ್ಮೂರೇ ವಾಸಿಯಾಗಿತ್ತು—ಈ ಹಾಳೂರಿಗೆ ಬರಲಾಗಿ ಊಟಕ್ಕೂ ಸಮಯವಿಲ್ಲ' ಎಂದುಕೊಂಡಳು. ಪಾರ್ವತಿಯ ಕಣ್ಣೀರು ತುಂಬಿದ ಮುಖವನ್ನು ನೋಡಿ ನನ್ನ ಮನಸ್ಸು ನೊಂದರೂ ಆಗ ಅವಳನ್ನು ಸಮಾಧಾನಪಡಿಸುವಂತಿರಲಿಲ್ಲ. ಹೋಗಿ ಕದ ತೆರೆದೆ.

ಕದ ತಟ್ಟಿದವನೊಬ್ಬ ಹುಡುಗ—ಸುಬ್ಬು—ಆ ಊರಿನ ಬಿಟ್ಟೀ ಬಸವಯ್ಯ. 'ಏನೋ' ಎಂದು ಕೇಳಿದೆ. 'ರಾಜಮ್ಮಾವ್ರ ಮನೇಲಿ ಬಾಳ ಕಾಯ್ಲೆ ಅಂತೆ. ಈಗ್ಲೇ ಬರ್ಬೇಕಂತೆ' ಎಂದ. ರಾಜಮ್ಮ! ಅವಳ ಹೆಸರನ್ನು ಕೇಳಿದ ಕೂಡಲೇ ಕದ ತೆರೆಯುವಾಗಿದ್ದ ಸಹಾನುಭೂತಿ, ಕರುಣೆ ಎಲ್ಲೋ ಮಾಯವಾಯ್ತು. 'ಬೆಳಿಗ್ಗೆ ಬರುತ್ತೇನೆ. ನಡೆ' ಎಂದೆ. ಅವನು ಹೊರಟುಹೋದ. ಕದಮುಚ್ಚಿ ನಾನೂ ಒಳಗೆ ಹೋದೆ. ಪಾರ್ವತಿ ಊಹಿಸಿದ್ದಂತೆ ನಾನು ಹೊರಟುಹೋಗದೆ ಮರಳಿಬಂದುದರಿಂದ ಅವಳಿಗೂ ಸಮಾಧಾನವಾಯ್ತು. ಊಟಕ್ಕೆ ಬಡಿಸುತ್ತಾ 'ಯಾರು ಬಂದವರು?' ಎಂದು ಕೇಳಿದಳು. 'ಸುಬ್ಬು, ರಾಜಮ್ಮನ ಮನೆಗೆ ಕೂಡಲೇ ಬರಬೇಕೆಂದು ಕರೆಯುವುದಕ್ಕೆ' ಎಂದೆ. ರಾಜಮ್ಮನ ಹೆಸರು ಕೇಳಿ ಪಾರ್ವತಿ 'ಅವಳಿಗೇನೀಗ ಕೇಡು! ಬೆಳಿಗ್ಗೆ ಹೋದರೆ ಸಾಲದೇನೋ? ಇಷ್ಟಕ್ಕೂ ಸತ್ತುಹೋದರೆ ಭೂಮಿಭಾರವೇ ಕಮ್ಮಿಯಾಯ್ತು' ಎಂದಳು.

ರಾಜಮ್ಮ—ಹೆಸರನ್ನು ಕೇಳಿದ ಮಾತ್ರದಿಂದಲೇ ತಿರಸ್ಕರಿಸಲ್ಪಡುತ್ತಿದ್ದ ರಾಜಮ್ಮ—ಸೂಳೆ. ನಾನವಳನ್ನು ಕಣ್ಣಾರೆ ನೋಡಿರಲಿಲ್ಲವಾದರೂ ಅವಳ ವಿಷಯವಾಗಿ ಜನರಾಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳಿಯೇ 'ಅವಳು ನಿಜವಾಗಿಯೂ ರಾಕ್ಷಸಿ' ಎಂದೆನಿಸಿಹೋಗಿತ್ತು ನನಗೆ. 'ಅಂಥವಳ ಮನೆಗೆ ಈಗ ಯಾರು ಹೋಗುತ್ತಾರೆ? ಬೆಳಗಿನಿಂದಲೂ ಊಟ ಸಹ ಮಾಡಿಲ್ಲ—ನಾಳೆ ಬೆಳಿಗ್ಗೆ ಹೋದರಾಯಿತು' ಎಂದು ಸಮಾಧಾನ ಮಾಡಿಕೊಂಡು ಮಲಗಿದೆ. ಅಷ್ಟರಲ್ಲಿ ಪುನಃ ಬಾಗಿಲನ್ನು ಬಡಬಡನೆ

ಬಡಿಯುವ ಶಬ್ದ ಕೇಳಿಸಿತು. ಹೋಗಿ ಬಾಗಿಲು ತೆರೆದೆ. ಸುಬ್ಬು! 'ಈಗ್ಲೇ ಬರ್ಬೇಕಂತೆ ಡಾಕ್ಟ್ರೇ, ಬಹಳ ಜೋರಂತೆ. ಕಾಲಿಗೆ ಬಿದ್ದು ಕರ್ಕೊಂಡು ಬಾ ಅಂದ್ರು' ಎಂದ. 'ಯಾರಿಗೋ ಕಾಯಿಲೆ?' ಎಂದು ಕೇಳಿದೆ. ಅವನಿಗೆ ಗೊತ್ತಿರಲಿಲ್ಲ. ಅಂತೂ ಕಾಯಿಲೆ ರಾಜಮ್ಮನಿಗಲ್ಲ ಎಂದು ತಿಳಿಯಿತು. ಇನ್ನಾರಿಗೆ? ಯಾರಿಗೇ ಆದರೂ—ರಾಜಮ್ಮನಿಗೇ ಆದರೂ ಹೋಗಿ ನೋಡುವುದು ನನ್ನ ಕರ್ತವ್ಯ. ಅವಳು ಸೂಳೆ ಎಂಬ ಮಾತ್ರಕ್ಕೆ ಅಷ್ಟೊಂದು ಅಲಕ್ಷ್ಯಮಾಡಲು ನನಗೆಲ್ಲಿಯ ಅಧಿಕಾರ? ಸ್ವಲ್ಪ ಹೊತ್ತಿನ ಮೊದಲೇ ನನ್ನ ಕರ್ತವ್ಯವನ್ನು ಅವಳು ಸೂಳೆ ಎಂಬ ನೆವನದಿಂದ ಬದಿಗೊತ್ತಿ ಸಮಾಧಾನ ಮಾಡಿಕೊಂಡಿದ್ದೆ. ನೆನಸಿಕೊಂಡು ನನಗೇ ನಾಚಿಕೆಯಾಯ್ತು—'ಬರುತ್ತೇನೆ ತಡೆ' ಎಂದು ಹೇಳಿ ಒಳಗೆ ಹೋಗಿ ಬೇಗ ಬೇಗ ಬಟ್ಟೆ ಹಾಕಿಕೊಂಡೆ. ಪಾರ್ವತಿಗೆ ನಿದ್ರೆ ಬಂದುಹೋಗಿತ್ತು. ಔಷಧಿಯ ಪೆಟ್ಟಿಗೆಯನ್ನು ತೆಗೆದುಕೊಂಡು ಹಾಗೆಯೇ ಬಾಗಿಲನ್ನೆಳೆದುಕೊಂಡು ಹೊರಟೆ.

ರಾಜಮ್ಮನ ಮನೆ ನಮ್ಮನೆಗೆ ಸುಮಾರು ಮುಕ್ಕಾಲುಮೈಲು ದೂರದಲ್ಲಿ ಒಂದು ತೋಟದೊಳಗೆ ಒಂಟಿಯಾಗಿತ್ತು. ಅದರ ಹತ್ತಿರ ಹತ್ತುಹನ್ನೆರಡು ಮಾರು ದೂರದಲ್ಲಿ ಒಂದೆರಡು ಒಡ ಕೂಲಿಯವರ ಗುಡಿಸಲುಗಳಲ್ಲದೆ ಬೇರೆ ಮನೆಗಳಿರಲಿಲ್ಲ. ನಾವು ಹೋಗುವಾಗ ರಾಜಮ್ಮನ ಮನೆಬಾಗಿಲು ತೆರೆದೇ ಇತ್ತು. ಸುಬ್ಬು 'ಅಮ್ಮಾವ್ರೇ' ಎಂದು ಕೂಗಿದ. ರಾಜಮ್ಮ ಹೊರಗೆ ಬಂದಳು. ಅದೇ ಮೊಟ್ಟಮೊದಲು ನಾನು ರಾಜಮ್ಮನನ್ನು ನೋಡಿದ್ದು. ಅವಳ ವಿಷಯವಾಗಿ ಜನರಾಡುತ್ತಿದ್ದ ಮಾತುಗಳನ್ನು ಕೇಳಿ ರಾಜಮ್ಮ ರಾಕ್ಷಸಿ ಎಂಬ ಭಾವನೆಯಾಗಿಹೋಗಿತ್ತು ನನಗೆ. ಆದರೆ ಅದೇಕೋ—ವ್ಯಸನದಿಂದ ಬಾಡಿದ್ದ ಅವಳ ಮುಖವನ್ನೂ ಅತ್ತು ಅತ್ತು ಕೆಂಪಾಗಿ ಊದಿಕೊಂಡಿದ್ದ ಅವಳ ಕಣ್ಣುಗಳನ್ನೂ ನೋಡಿ ನನಗೆ ಅತ್ಯಂತ ಕರುಣೆಯುಂಟಾಯಿತು. 'ಯಾರಿಗಮ್ಮಾ ಕಾಯಿಲೆ?' ಎಂದು ಕೇಳಿದೆ. ರಾಜಮ್ಮ ಪ್ರತ್ಯುತ್ತರ ಕೊಡದೆ ನನ್ನನ್ನು ಒಳಗೆ ಕರೆದುಕೊಂಡು ಹೋದಳು. ಅಲ್ಲೊಂದು ಕೋಣೆಯಲ್ಲಿ ಮಂಚದ ಮೇಲೊಬ್ಬನು

ಮಲಗಿದ್ದ. ರಾಜಮ್ಮ ಆತನ ಕಡೆಗೆ ಕೈತೋರಿದಳು. ಹತ್ತಿರಹೋಗಿ ನೋಡಿದೆ. ಸತ್ತ ಹೆಣದ ಮುಖದಂತಿತ್ತು ಅವನ ಮುಖ. ಕಣ್ಣುಗಳನ್ನು ಬಿಟ್ಟುಕೊಂಡೇ ಇದ್ದರೂ ಆ ಕಣ್ಣುಗಳಲ್ಲಿ ಜೀವನದ ಬೆಳಕಿದ್ದಂತೆ ತೋರಲಿಲ್ಲ. ಬಗ್ಗಿ ಆತನ ಕೈಹಿಡಿದು ನೋಡಿದೆ. ಬೆಂಕಿಯಂತೆ ಸುಡುತ್ತಿತ್ತು ಕೈ. ಜ್ವರದ ತಾಪದಿಂದ ಅವನಿಗೆ ಪ್ರಜ್ಞೆ ಇರಲಿಲ್ಲ. ನೋಡಿದೊಡನೆಯೇ ಆತ ಬದುಕುವಂತಿಲ್ಲವೆಂದು ನನಗೆ ತಿಳಿಯಿತು. ರಾಜಮ್ಮ ಅವನ ಕಾಲ ಹತ್ತಿರ ತಲೆಯನ್ನಿಟ್ಟುಕೊಂಡು ಶೂನ್ಯದೃಷ್ಟಿಯಿಂದ ನನ್ನ ಕಡೆ ನೋಡುತ್ತಿದ್ದಳು. ನಾನು ಎಷ್ಟೋ ಜನರು ಸಾಯುವುದನ್ನು ನೋಡಿದ್ದೇನೆ. ಅದೆಷ್ಟೋ ಜನರು ಎದೆ ಎದೆ ಬಡಿದುಕೊಂಡು ಅಳುವ ಕರುಣಾಕ್ರಂದನವನ್ನೂ ಕೇಳಿದ್ದೇನೆ. ಆದರೆ ಅದಾವ ದೃಶ್ಯಗಳೂ ರಾಜಮ್ಮನ ಮೂಕರೋದನದಷ್ಟು ವ್ಯಥೆಯನ್ನುಂಟುಮಾಡಿರಲಿಲ್ಲ.

ಸ್ವಲ್ಪ ಹೊತ್ತಿನ ಹಿಂದೆ ನಾನು ರಾಜಮ್ಮನನ್ನು ನೋಡಿ ಸಹ ಇರಲಿಲ್ಲ. ಅವಳ ವಿಷಯದಲ್ಲಿ ತಿರಸ್ಕಾರವಿತ್ತು; ಸತ್ತರೂ ಸಾಯಲಿ ಎಂಬ ಭಾವನೆ ಇತ್ತು. ಒಂದು ಸಾರಿ ಅವಳ ಅಳುವ ಮುಖವನ್ನು ನೋಡಿದ ಮಾತ್ರದಿಂದ ನನಗವಳ ವಿಷಯದಲ್ಲಿದ್ದ ಎಲ್ಲ ಭಾವನೆಗಳೂ ಮಾಯವಾಗಿ ಅಸೀಮಕರುಣೆಯೊಂದು ಮಾತ್ರ ಅದೇಕೆ ಉಳಿಯಿತೋ ಹೇಳಲಾರೆ. ಅವಳ ಪ್ರಾಯವೇನೂ ಹೆಚ್ಚಾಗಿದ್ದಂತೆ ತೋರಲಿಲ್ಲ. ನನ್ನ ಮಗಳು ಶಾಂತಿಗಿಂತ ಒಂದೆರಡು ವರ್ಷಕ್ಕೆ ಹಿರಿಯಳೋ ಏನೋ. ಇಷ್ಟೊಂದು ಚಿಕ್ಕ ಪ್ರಾಯದಲ್ಲೇ ಇಂತಹ ಅವಸ್ಥೆ! ಹೆಸರಾದ ಸೂಳೆ ಎಂಬ ಕೀರ್ತಿ!!

ಮಲಗಿದ್ದ ಮನುಷ್ಯ ಹೊರಳಾಡಿದ. ನಾನು ಕುಡಿಸಿದ ಔಷಧಿಯ ಪ್ರಭಾವದಿಂದ ಅವನನ್ನು ಬದುಕಿಸುವುದು ಅಸಾಧ್ಯವಾದರೂ ಅವನಿಗೆ ಸ್ಮೃತಿ ಬರುವ ಸಂಭವವಿತ್ತು. ಕಾಲದಿಸೆಯಲ್ಲಿ ಕುಳಿತಿದ್ದ ರಾಜಮ್ಮ ಎದ್ದು ಬೆವರುತ್ತಿದ್ದ ಅವನ ಮುಖವನ್ನು ಒರಸತೊಡಗಿದಳು. ಆತನ ತುಟಿ ಅಲುಗಾಡಿತು. ಸ್ವಲ್ಪ ನೀರನ್ನು ಕುಡಿಸುವಂತೆ ಹೇಳಿದೆ. ಅವಳು ಒಂದೆರಡು ಚಮಚ ನೀರನ್ನು ಕುಡಿಸುತ್ತಲೆ ಅವನು ಬಹು ಮೆಲ್ಲಗೆ

೫೦ ಬ ಸಿ

'ರಾಣಿ' ಎಂದ. ರಾಜಮ್ಮ ನನ್ನ ಕಡೆಗೊಮ್ಮೆ ಕೃತಜ್ಞತೆಯಿಂದ ನೋಡಿ, 'ಏನು ಮನು?' ಎಂದಳು. ಪಾಪ, ಅವಳಿಗೆ ಗೊತ್ತಿರಲಿಲ್ಲ–ಆರುವ ಮೊದಲು ದೀಪ ಜೋರಾಗಿ ಉರಿಯುವುದೆಂದು. 'ರಾಣೀ, ರಾಣೀ, ರಾಣೀ' ಎಂದು ಕೂಗುತ್ತ ಆತ ಅವಳ ಕೈಗಳನ್ನು ಹಿಡಿದುಕೊಂಡ. 'ಇಲ್ಲೆ ಇದ್ದೇನೆ, ಮನು ಏನು?' ಎಂದು ರಾಜಮ್ಮ ಕೇಳಿದಳು. ಪುನಃ ಇನ್ನೊಮ್ಮೆ 'ರಾಣೀ' ಎಂದು ಜೋರಾಗಿ ಚೀರಿದ ಆತ. ಆಯ್ತು ಅದೇ ಅಂತ್ಯ.

ಬೆಳಗಿನ ಹತ್ತುಗಂಟೆಯಾಗಿತ್ತು ಮರುದಿನ ನಾನು ಮನೆಗೆ ಹೋಗುವಾಗ. ಮಕ್ಕಳಿಬ್ಬರೂ ಸ್ಕೂಲಿಗೆ ಹೋಗಿದ್ದರು. ಪಾರ್ವತಿ ಹೋದೊಡನೆಯೇ 'ಎಲ್ಲಿಗೆ ಹೋಗಿದ್ರಿ? ರಾತ್ರಿನೇ ಹೋದ್ರೋ, ಬೆಳಗಾಗಿತ್ತೋ? ಯಾರಿಗೆ ಕಾಯ್ಲೆ?' ಎಂದು ಮುಂತಾಗಿ ಪ್ರಶ್ನೆಗಳ ಮಳೆಯನ್ನೇ ಸುರಿಸಿಬಿಟ್ಟಳು. ಆದರೆ ಆಗ ಅವಳ ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಕೊಡುವ ಸ್ಥಿತಿಯಲ್ಲಿರಲಿಲ್ಲ ನನ್ನ ಮನಸ್ಸು. ಹಿಂದಿನ ದಿನದ ಆ ರೋಗಿ, ಕೆದರಿದ ಕೂದಲಿನ ಊದಿದ ಕಣ್ಣುಗಳ ಬಾಡಿದ ಮುಖದ ರಾಜಮ್ಮ, ಅವಳ ಮೂಕರೋದನ ಎಲ್ಲಾ ಕಣ್ಣುಮುಂದೆ ಕಟ್ಟಿದಂತಿತ್ತು. ನನ್ನಿದಿರು ಪಾರ್ವತಿಯೇ ನಿಂತಿದ್ದರೂ ನನ್ನ ಕಣ್ಣುಗಳಿಗೆ ರಾಜಮ್ಮನ ಬಾಡಿ ಬೆಂಡಾಗಿದ್ದ ಆ ಮುಖ ಕಾಣಿಸುತ್ತಿತ್ತು.

ನಾನು ಮೂಕನಂತೆ ಬೆಪ್ಪಾಗಿ ನಿಂತಿರುವುದನ್ನು ನೋಡಿ ಪಾರ್ವತಿಗೆ ಆಶ್ಚರ್ಯವೇ ಆಗಿರಬೇಕು. ಹಿಂದಿನ ದಿನದ ನನ್ನ ವಿಪರೀತದ ಕೆಲಸದಿಂದಲೇ ನಾನು ಹಾಗಿರುವುದೆಂದು ಅವಳು ಬಲು ನೊಂದುಕೊಂಡಳು. 'ನಿನ್ನೆ ಇಡೀ ದಿನ ನಿದ್ರೆಯಿಲ್ಲ; ಹೊತ್ತಿಗೆ ಸರಿಯಾಗಿ ಊಟವಿಲ್ಲ. ಇನ್ನಾದರೂ ಫಲಾಹಾರ ಮಾಡಿ ವಿಶ್ರಾಂತಿ ತಕ್ಕೊಳ್ಳಿ' ಎಂದು ಕಾಫಿ ತಿಂಡಿಯನ್ನು ತಂದಿಟ್ಟುಕೊಂಡು ಬಲವಂತಪಡಿಸತೊಡಗಿದಳು. 'ಈಗೇನೂ ಬೇಡ ಪಾರ್ವತಿ. ಸ್ವಲ್ಪ ಮಲಗಿ ನಿದ್ರೆಮಾಡಿದರೆ ಎಲ್ಲಾ ಸರಿಯಾಗುತ್ತೆ' ಎಂದು ಬಟ್ಟೆಯನ್ನು ಸಹ ಬದಲಾಯಿಸದೆ ಹಾಗೆಯೇ ಬಿದ್ದುಕೊಂಡೆ. ನಾನು ನಿದ್ರೆ ಮಾಡಲೆಳಸುವೆನೆಂದೆಣಿಸಿ ಪಾರ್ವತಿ ಹೊರಗೆ ಹೊರಟಳು.

'ಇಲ್ಲಿ ಬಂದು ಕೂತ್ಕೋ ಪಾರ್ವತಿ' ಎಂದೆ. ಪಾರ್ವತಿ ನನ್ನ ಹತ್ತಿರ ಬಂದು ಕುಳಿತಳು. 'ಇವತ್ತು ನಿಮಗೇನಾಗಿದೆ' ಎಂದು ಕೇಳುವಂತಿತ್ತು ಪಾರ್ವತಿಯ ಪ್ರಶ್ನಾಸೂಚಕವಾದ ದೃಷ್ಟಿ. ನಾನವಳಿಗೆ ಹಿಂದಿನ ರಾತ್ರಿ ರಾಜಮ್ಮನ ಮನೆಯಲ್ಲಿ ನಡೆದುದೆಲ್ಲವನ್ನೂ ಹೇಳಿದೆ. ನನ್ನ ಮಾತುಗಳನ್ನು ಕೇಳಿ ಪಾರ್ವತಿ 'ಸತ್ತವನು ಯಾರು ? ರಾಜಮ್ಮನಿಗೆ ಏನಾಗಬೇಕು ?' ಎಂದು ಕೇಳಿದಳು. ಅಷ್ಟರವರೆಗೂ ನನಗಾ ವಿಷಯ ಹೊಳೆದಿರಲಿಲ್ಲ. ಸತ್ತವನು ಯಾರು ? ರಾಜಮ್ಮನಿಗೆ ಅಷ್ಟೊಂದು ವ್ಯಸನವನ್ನುಂಟು ಮಾಡಲು ಅವನಿಗೂ ಅವಳಿಗೂ ಏನು ಸಂಬಂಧ ? ಎಂದು ನನಗೂ ಈಗ ಎನಿಸಿತು. ಪಾರ್ವತಿಗೆ ರಾಜಮ್ಮನ ಮೇಲೆ ಬಹಳ ಸಂದೇಹ: 'ಎಲ್ಲಾ ದರೂ ರಾಜಮ್ಮ ಅವನನ್ನು ವಿಷಹಾಕಿ ಕೊಂದಿರಬಹುದೇ' ಎಂತ. ಒಂದೇ ಒಂದು ದಿನದ ಹಿಂದೆ ಪಾರ್ವತಿಯಂತೆಯೇ ನನಗೂ ಸಂದೇಹ ಉಂಟಾಗುತ್ತಿತ್ತು. ರಾಜಮ್ಮನನ್ನೊಂದು ಸಾರಿ ನೋಡಿದ ಮೇಲೆ ನನ್ನ ಆ ತರದ ಭಾವನೆಗಳೆಲ್ಲಾ ಬದಲಾಗಿಹೋಗಿದ್ದವು. ಆದರಿಂದ ಅವಳ ವಿಷಯದಲ್ಲಿ ಪಾರ್ವತಿಯ ಸಂಶಯದ ಮಾತುಗಳನ್ನು ಕೇಳಿ ನನಗೆ ಕೋಪಬಂತು. 'ಸುಮ್ಮನಿರು ಪಾರ್ವತಿ' ಎಂದುಬಿಟ್ಟೆ. ನನ್ನ ಸ್ವರ ಕಠೋರವಾಗಿದ್ದಿರಬೇಕು ಸಿಟ್ಟಿನಿಂದ. ಪಾರ್ವತಿಯ ಕಣ್ಣುಗಳಲ್ಲಿ ನೀರು ತುಂಬಿತು. ಅವಳ ಮುಖವನ್ನು ನೋಡಿ ನನ್ನ ಕಠೋರತೆಗಾಗಿ ನಾಚಿಕೆ ಯಾಯ್ತು. ಅವಳನ್ನು ಸಮಾಧಾನಪಡಿಸುತ್ತ 'ರಾಜಮ್ಮ ವಿಷಹಾಕಿ ಕೊಲ್ಲುವಂಥ ರಾಕ್ಷಸಿಯಂತೆ ತೋರುವುದಿಲ್ಲ ಪಾರ್ವತಿ. ನಮ್ಮ ಶಾಂತಿ ಗಿಂತ ಎಲ್ಲಾದರೂ ಒಂದೆರಡು ವರ್ಷಕ್ಕೆ ದೊಡ್ಡವಳಾಗಿರಬೇಕು. ಪಾಪ, ಅವಳನ್ನು ನೋಡುವಾಗ ಬಹಳ ಮರುಕವಾಗುತ್ತೆ. ಜನರಿಗೇನು, ಸುಮ್ಮನೆ ಏನಾದರೂ ಹೇಳುತ್ತಿರುತ್ತಾರೆ' ಎಂದು ಹೇಳಿದೆ. ಆದರೆ ಪಾರ್ವತಿಗೆ ರಾಜಮ್ಮನ ಮೇಲಿನ ಸಂದೇಹವು ಸಂಪೂರ್ಣವಾಗಿ ದೂರ ವಾದಂತೆ ತೋರಲಿಲ್ಲ. ಸತ್ತವನು ಹಣಗಾರನಾಗಿರಬಹುದು—ಅವನ ಹಣಕ್ಕಾಗಿ ಅವನನ್ನು ಕೊಂದಿರಬಹುದು—ಈಗ ವ್ಯಸನವನ್ನು ನಟಿಸಿ ಪಾರಾಗಲು ಯತ್ನಿಸುತ್ತಿದ್ದಾಳೆ ಎಂದು ಪಾರ್ವತಿಯ ಊಹನೆ.

ಆ ದಿನ ನಾನು ಆಸ್ಪತ್ರೆಗೆ ಹೋಗಲಿಲ್ಲ. ವಿಶ್ರಾಂತಿಯನ್ನು ತೆಗೆದು ಕೊಳ್ಳುವ ನೆಪದಿಂದ ಹಾಸಿಗೆಯ ಮೇಲೆಯೇ ಹೊರಳಾಡುತ್ತಿದ್ದೆ. ನಿದ್ರೆ ಮಾತ್ರ ಎಷ್ಟೆಷ್ಟು ಪ್ರಯತ್ನಿಸಿದರೂ ಬರಲಿಲ್ಲ. ಕೊನೆಗೆ ಸಾಯಂಕಾಲ ಸ್ವಲ್ಪ ಹೊರಗೆ ಹೋಗಿ ತಿರುಗಾಡಿಕೊಂಡಾದರೂ ಬರೋಣ ಎಂದು ಹೊರಟೆ. ನನಗೆ ತಿಳಿಯದಂತೆಯೇ ಕಾಲುಗಳು ನನ್ನನ್ನು ರಾಜಮ್ಮನ ಮನೆಯ ಕಡೆಗೆ ಎಳೆದುಕೊಂಡು ಹೋದುವು. ಬಾಗಿಲು ತೆರೆದಿತ್ತು. ಒಳಗೆ ಹೋದೆ. ಹಿಂದಿನ ದಿನ ರೋಗಿಯು ಮಲಗಿದ್ದ ಮಂಚದ ಹತ್ತಿರ ನೆಲದ ಮೇಲೆ ಕುಳಿತುಕೊಂಡು ನಟ್ಟದೃಷ್ಟಿಯಿಂದ ಬಾಗಿಲಕಡೆ ನೋಡು ತ್ತಿದ್ದಳು ರಾಜಮ್ಮ. ಅದೇ ಬಾಗಿಲಿಗಾಗಿ ನಾನು ಒಳಗೆ ಹೋಗಿದ್ದರೂ ನನ್ನನ್ನವಳು ನೋಡಿದಂತೆ ತೋರಲಿಲ್ಲ. ನನಗವಳ ಸ್ಥಿತಿಯನ್ನು ನೋಡಿ ಬಹಳ ಕಳವಳವಾಯ್ತು. ಹೆಣದ ದಹನವಾಗಿತ್ತು—ಈಗ ಅವಳೊಬ್ಬಳೇ ಆ ಮನೆಯಲ್ಲಿ. ಸೂಳೆಯ ಜೊತೆಗೆ ಹೋಗುವರು ಯಾರು? ಪಾರ್ವತಿ ಯನ್ನಾದರೂ ಜೊತೆಯಲ್ಲಿ ಕರೆತರಬೇಕಾಗಿತ್ತು ಎನ್ನಿಸಿತು ನನಗೆ. ಹಿಂದಿನ ದಿನ ಯಾರಾದರೂ ನನ್ನೊಡನೆ ರಾಜಮ್ಮನ ಮನೆಗೆ ನನ್ನ ಹೆಂಡತಿಯನ್ನು ಕರೆದುಕೊಂಡು ಹೋಗೆಂದಿದ್ದರೆ ನಾನವರೊಡನೆ ಖಂಡಿತವಾಗಿಯೂ ಜಗಳಾಡಿಬಿಡುತ್ತಿದ್ದೆ. ರಾಜಮ್ಮನನ್ನು ನೋಡಿದ ಮೇಲೆ ಆ ತರದ ಭಾವನೆ ಗಳೇಕೋ ಮಾಯವಾಗಿ ಹೋಗಿದ್ದುವು. ಹಿಂದೆ ನಾನವಳ ವಿಷಯವಾಗಿ ನೆನಸಿಕೊಂಡುದನ್ನೆಲ್ಲಾ ಯೋಚಿಸಿಕೊಂಡಾಗ ನನ್ನ ಮೇಲೆ ನನಗೇ ಧಿಕ್ಕಾರ ಉಂಟಾಗುತ್ತಿತ್ತು.

ಅವಳಿಗೆ ನಾನು ಹೋದುದು ತಿಳಿಯಲಿಲ್ಲ. 'ರಾಜಮ್ಮಾ' ಎಂದು ಕೂಗಿದೆ. ಬೇರೆ ಯಾವುದನ್ನೋ ನೋಡುತ್ತಿದ್ದವಳು ಫಕ್ಕನೆ ತಿರುಗು ವಂತೆ ನನ್ನ ಮಾತು ಕೇಳಿ ಅವಳು ತಿರುಗಿದಳು. ಮೊದಮೊದಲು ನಾನು ಯಾರೆಂತ ಅವಳಿಗೆ ಗುರುತು ಸಿಕ್ಕಿದಂತೆ ತೋರಲಿಲ್ಲ. ಅವಳನ್ನು ನಾನೆಷ್ಟೋ ಸಮಾಧಾನಪಡಿಸಲು ಯತ್ನಿಸಿದೆ. ಅವಳು ಅಳುತ್ತಿರಲಿಲ್ಲ ವಾದರೂ ನನ್ನ ಮಾತುಗಳಿಂದ ಅವಳಿಗೆ ಸಮಾಧಾನವಾದಂತೆ ತೋರ ಲಿಲ್ಲ. ಕತ್ತಲಾಗುತ್ತ ಬಂದಿತ್ತು. ಅವಳೊಬ್ಬಳೇ ಆ ಮನೆಯಲ್ಲಿ. ಆದರೆ

ನಾನೇನೂ ಮಾಡುವಂತಿರಲಿಲ್ಲ. ಕೊನೆಗೆ ಯಾರನ್ನಾದರೂ ಜೊತೆಗೆ ಕಳು ಹಿಸುತ್ತೇನೆಂದು ಹೇಳಿ ಹೊರಟೆ. ಬಾಯಲ್ಲಿ ಹೇಳುವಷ್ಟು ಸುಲಭವಾಗಿರ ಲಿಲ್ಲ ರಾಜಮ್ಮನ ಮನೆಗೆ ಜನರನ್ನು ಕಳುಹಿಸುವುದು. ಅಂತೂ ಕೊನೆಗೆ ನಮ್ಮನೆಯ ಕೆಲಸದವಳನ್ನು ಆ ರಾತ್ರಿಯ ಮಟ್ಟಿಗೆ ಅಲ್ಲಿಗೆ ಹೋಗಲು ಒಪ್ಪಿಸಿದೆ. ಶಾಂತಿ ತಾನೂ ಅವಳೊಡನೆ ಹೋಗುತ್ತೇನೆಂದಳು. ನನ್ನ ಆಕ್ಷೇಪಣೆ ಇಲ್ಲದಿದ್ದರೂ ಪಾರ್ವತಿ ಅವಳನ್ನು ಕಳುಹಿಸಲು ಒಪ್ಪಲಿಲ್ಲ.

ಎರಡು ದಿನಗಳಿಂದ ನಿದ್ರೆ ಸರಿಯಾಗಿಲ್ಲದುದರಿಂದ ಆ ದಿನ ನಿದ್ರೆ ಚೆನ್ನಾಗಿ ಬಂದುಹೋಗಿತ್ತು ನನಗೆ. ಪಾರ್ವತಿಯೂ ಎಚ್ಚರಗೊಳಿಸಿರ ಲಿಲ್ಲ. ಆದರಿಂದ ಆ ದಿನ ನಾನು ಏಳುವಾಗ ಎಂಟು ಹೊಡೆದುಹೋಗಿತ್ತು. ಆಸ್ಪತ್ರೆಗೆ ಹೋಗಲು ಹೊತ್ತಾಗುವುದೆಂದು ಅವಸರವಾಗಿ ಹೊರಟಿದ್ದೆ. ಗೇಟನ್ನು ದಾಟುವಾಗ ರಾತ್ರಿ ರಾಜಮ್ಮನ ಮನೆಗೆ ಹೋಗಿದ್ದ ನಮ್ಮ ಕೆಲಸದವಳು ಇದಿರಾಗಿ ಬಂದಳು. ಅವಸರದಲ್ಲಿ ರಾಜಮ್ಮನ ಸುದ್ದಿಯೇ ಮರೆತುಹೋಗಿತ್ತು ನನಗೆ. ಅವಳನ್ನು ನೋಡಿ ರಾಜಮ್ಮ ಹೇಗಿದ್ದಾಳೆ ಎಂದು ವಿಚಾರಿಸಿದೆ. ತಾನು ಬರುವಾಗ ಇನ್ನೂ ಎದ್ದಿರಲಿಲ್ಲವೆಂದೂ ನಿದ್ರೆ ಮಾಡುತ್ತಾಳೆಂದೂ ಹೇಳಿ ಅವಳು ತನ್ನ ಕೆಲಸಕ್ಕೆ ಹೊರಟು ಹೋದಳು.

ಆ ದಿನ ನನಗೂ ಸ್ವಲ್ಪ ಹೆಚ್ಚು ಕೆಲಸವಿತ್ತು. ಅದೇ ಮನೆಗೆ ಊಟಕ್ಕೆ ಬರುವಾಗ ಮೂರುಗಂಟೆಯಾಗಿತ್ತು. ಊಟವಾದ ಮೇಲೆ ನಾನೂ ಪಾರ್ವತಿಯೂ ಮಾತಾಡುತ್ತ ಕುಳಿತಿರುವಾಗ ಮಧ್ಯಾಹ್ನದ ಟಪ್ಪಾಲಿನಲ್ಲಿ ಬಂದ ಒಂದು ಕಾಗದವನ್ನು ಪಾರ್ವತಿ ಕೊಟ್ಟಳು. ಕಾಗದ ವನ್ನು ಬಿಡಿಸಿದೆ. ಅಕ್ಷರಗಳು ನನಗೆ ಪರಿಚಿತವಾಗಿರಲಿಲ್ಲ. ಯಾರ ಕಾಗದ ವಿರಬಹುದೆಂದು ಕುತೂಹಲದಿಂದ ಕೊನೆಯನ್ನು ನೋಡಿದೆ. ರಾಜಮ್ಮ! ನನಗೆ ತುಂಬಾ ಆಶ್ಚರ್ಯವಾಯ್ತು. ರಾಜಮ್ಮ ನನಗೆ ಬರೆಯುವಂತಹ ವಿಷಯವೇನು! ಆತರದಿಂದ ಓದತೊಡಗಿದೆ:

“ಡಾಕ್ಟರ್,

ನನ್ನಂತವಳ ಮೇಲೆ ಜನರಿಗೆ ಕರುಣೆ ಇರುವುದು ಅಪರೂಪ.

ನನ್ನಂತವರಿಗೆ ಕಷ್ಟಬಂದಾಗ ಸಹಾಯ ಮಾಡುವುದು ಸಹ ಮನುಷ್ಯ ಧರ್ಮಕ್ಕೆ ವಿರೋಧವೆಂದು ಭಾವಿಸುವವರೇ ಹೆಚ್ಚು. ಇಷ್ಟು ದಿನ–ಈಗ ನಾಲ್ಕು ವರ್ಷ ನಾನು ಯಾರಿಂದಲೂ ಸಹಾಯವನ್ನಾಗಲಿ ಸಹಾನುಭೂತಿ ಯನ್ನಾಗಲಿ ಅಪೇಕ್ಷಿಸಿದವಳಲ್ಲ. ಮೊನ್ನೆ ಮನುವಿಗೆ ಒಂದೇ ಸಾರಿ ಜ್ವರ ಜೋರಾಯಿತು.

"ಸುಬ್ಬು ವಿನಾ ನನ್ನ ಮನೆಯ ಕಡೆಗೆ ಮತ್ತಾರೂ ಸುಳಿಯು ವುದಿಲ್ಲ. ಅವನನ್ನೇ ಕಳುಹಿಸಿದೆ ಡಾಕ್ಟರನ್ನು ಕರೆದುಕೊಂಡು ಬರುವು ದಕ್ಕೆ. ತಾವು ಮನೆಯಲ್ಲಿರಲಿಲ್ಲ. . . . . ರ ಮನೆಗೆ ಕಳುಹಿಸಿದೆ. ಅವರು ನಿರ್ದಾಕ್ಷಿಣ್ಯವಾಗಿ ಬರುವುದಿಲ್ಲ ಎಂದು ಹೇಳಿ ಕಳುಹಿಸಿಬಿಟ್ಟರು. ಪುನಃ ನಿಮಗೇ ಹೇಳಿಕಳುಹಿಸಿದೆ. ನೀವು ಬೆಳಗ್ಗೆ ಬರುವೆನೆಂದುಬಿಟ್ಟಿರಿ. ಈ ಮಧ್ಯೆ ಮನುವಿಗೆ ನಿಮಿಷ ನಿಮಿಷಕ್ಕೆ ಜೋರಾಗುತ್ತಿತ್ತು. ಕಾಲಿಗೆ ಬಿದ್ದಾದರೂ ಕರೆದುಕೊಂಡು ಬಾ ಎಂದು ತಿರುಗಿ ಸುಬ್ಬುವನ್ನು ಕಳು ಹಿಸಿದೆ. ನಿಮಗೇನೋ ದಯೆ ಬಂತು, ನೀವು ಬಂದಿರಿ. ಆದರೆ ಮನು ವನ್ನು ಇಟ್ಟುಕೊಳ್ಳುವ ಭಾಗ್ಯ ನನಗಿರಲಿಲ್ಲ. ಅವನು ಹೊರಟುಹೋದ.

"ನಾನು ಯಾರು–ಮನು ಯಾರು? ನಮಗೆನಮಗೆ ಸಂಬಂಧ ವೇನು? ಎಂದು ಮುಂತಾಗಿ ನೀವು ಯೋಚಿಸಬಹುದು. ನನ್ನ ವಿಷಯ ವಾಗಿ ಜನರಾಡಿಕೊಳ್ಳುವ ಮಾತುಗಳನ್ನೂ ನೀವು ಕೇಳಿರಬಹುದು. ಹೌದು. ನನ್ನ ತಾಯಿ ಸೂಳೆಯಾಗಿದ್ದಳು. ನಾನೂ ಅದೇ ವೃತ್ತಿಗಾಗಿ ತಯಾರುಮಾಡಲ್ಪಟ್ಟಿದ್ದೆ. ನನ್ನ ತಾಯಿಯು ನನ್ನಿಂದ ತುಂಬ ಹಣ ಸಂಪಾದಿಸಲು ಬಯಸುತ್ತಿದ್ದಳು. ಅವಳ ಬಯಕೆಯೂ ನಿರರ್ಥಕವಾಗು ವಂತಿರಲಿಲ್ಲ. ಏಕೆಂದರೆ ಅನೇಕ ಗಣ್ಯಮಾನ್ಯ ಧನಿಗಳು ನನ್ನನ್ನು ಮೆಚ್ಚಿ ಮನಸೋತಿದ್ದರು. ಆದರೆ ಮನುವಿನಿಂದಾಗಿ ನನ್ನ ತಾಯಿಯ ಆಶೆ ನಿರಾಶೆಯಾಗಬೇಕಾಯಿತು. ಮನು–ಮೋಹನ ಎಂತ ಅಪಸ ಹೆಸರು– ಭಾಗ್ಯವಂತರ ಒಬ್ಬನೇ ಮಗ. ಚಿಕ್ಕಂದಿನಲ್ಲೇ ತಂದೆತಾಯಿಯರನ್ನು ಕಳೆದುಕೊಂಡಿದ್ದುದರಿಂದ ಹೇಳುವವರು ಕೇಳುವವರು ಯಾರೂ ಇರ ಲಿಲ್ಲ ಅವನಿಗೆ. ಒಂದು ದಿನ ನನ್ನ ತಾಯಿಯ ಹಳೆಯ ಸ್ನೇಹಿತನೊಬ್ಬನು

ಅವನನ್ನು ನಮ್ಮನೆಗೆ ಕರೆದುಕೊಂಡು ಬಂದನು. ಅಂದಿನಿಂದ ಯಾವಾ
ಗಲೂ ಮನು ನಮ್ಮನೆಗೆ ಬರತೊಡಗಿದ ನನಗಾಗಿ. ಸೂಳೆಯರಿಗೆ ಹೃದಯ
ವಿರಬಾರದೆಂದು ನನ್ನ ತಾಯಿ ಹೇಳಿಕೊಟ್ಟಿದ್ದರೂ ಮನುವನ್ನು ನಾನು
ಪ್ರೀತಿಸತೊಡಗಿದೆ. ಆತನೂ ನನ್ನನ್ನು ಪ್ರೀತಿಸುತ್ತಿದ್ದ. ಮನುವಿನ
ಮತ್ತು ನನ್ನ ವ್ಯವಹಾರಗಳು ನನ್ನ ತಾಯಿಗೆ ಸರಿಬೀಳುತ್ತಿದ್ದಿಲ್ಲ. ಈ
ಮಧ್ಯೆ ಮನುವಿನ ಹಣಕಾಸೆಲ್ಲಾ ನಮ್ಮ ಪೆಟ್ಟಿಗೆಗೆ ಸೇರಿಹೋಗಿತ್ತು. ಆದ
ರಿಂದ ಮುಂದೆ ಅವನಿಂದ ನನ್ನ ತಾಯಿಗೆ ಪ್ರಯೋಜನವಾಗುವಂತಿರಲಿಲ್ಲ.

"ಅಕಸ್ಮಾತ್ತಾಗಿ ಮನು ನಮ್ಮನೆಗೆ ಬರುವುದು ನಿಂತುಹೋಯ್ತು. ನಾನು ತಾಯಿಯನ್ನು ವಿಚಾರಿಸಿದಾಗ ಅವನು ಮದುವೆಯಾಗಿರುವ ನೆಂದು ಹೇಳಿದಳು. ಮನುವಿನ ಮದುವೆಯ ಮಾತು ಕೇಳಿ ನನಗೆ ಬಹಳ ದುಃಖವಾಯ್ತು. ಒಂದೆರಡು ತಿಂಗಳು ಪ್ರಾಣಾಂತಿಕವಾದ ಕಾಯಿಲೆ ಯಲ್ಲಿ ಮಲಗಿಹೋದೆ. ಆಗಲೇ ನಾನು ಏಕೆ ಸಾಯಲಿಲ್ಲವೋ! ಅಂತೂ ನನಗೆ ಜ್ವರ ಬಿಟ್ಟಾಗ ನಮ್ಮ ಕೆಲಸದವಳ ಮೂಲಕ ಮನು ಮದುವೆ ಯಾಗಲಿಲ್ಲವೆಂದೂ ನಾನು ಸತ್ತುಹೋದೆನೆಂದು ನಮ್ಮ ತಾಯಿ ಹುಟ್ಟಿಸಿದ ವರ್ತಮಾನದಿಂದ ಅವನು ಅರೆಹುಚ್ಚನಾಗಿರುವನೆಂದೂ ತಿಳಿಯಿತು. ಅದೇ ದಿನ ರಾತ್ರಿ ನಾನು ಮನೆ ಬಿಟ್ಟು ಹೊರಟುಬಿಟ್ಟೆ. ಮನುವಿನ ಮನೆಗೇ ಹೋದೆ. ಅವನು ಹುಚ್ಚನಾಗಿ ಹೋಗಿದ್ದ. ಹುಚ್ಚಿನಲ್ಲಿ ಕಣ್ಣಿಗೇನೋ ಹಾಕಿಕೊಂಡಿದ್ದರಿಂದ ಎರಡು ಕಣ್ಣುಗಳೂ ದೃಷ್ಟಿಹೀನವಾಗಿದ್ದುವು. ನಮಗೆ ಕೊಟ್ಟು ಉಳಿದಿದ್ದ ಹಣವೂ ಖರ್ಚಾಗಿಹೋಗಿತ್ತು. ಆದರೆ ನನ್ನ ಹತ್ತಿರ ಮನು ಉತ್ತಮಸ್ಥಿತಿಯಲ್ಲಿದ್ದಾಗ ಕೊಟ್ಟ ಕೆಲವು ನಗಗಳಿದ್ದುವು. ಅವುಗಳನ್ನೆಲ್ಲಾ ಮಾರಿ ಮನುವಿಗೆ ಚಿಕಿತ್ಸೆಮಾಡಿಸಿದೆ. ಚಿಕಿತ್ಸೆಯಿಂದ ಅವನ ಹುಚ್ಚು ಸಂಪೂರ್ಣ ವಾಸಿಯಾಗದಿದ್ದರೂ ಕೆಲವು ವೇಳೆ ಅವನು ಸರಿಯಾಗಿರುತ್ತಿದ್ದ. ಆದರೆ ಅದರಿಂದ ಆಗಾಗ ಜ್ವರ ಬರುತ್ತಿತ್ತು. ಅಂತೂ ಮೊದಲಿನ ಮನುವನ್ನು ನನ್ನ ತಾಯಿ ಕೊಂದುಹಾಕಿಬಿಟ್ಟಿದ್ದಳು. ಮನುವಿನ ಆ ಸ್ಥಿತಿಯಲ್ಲಿ ನಾನವನೊಡನೆ ಹೆಚ್ಚುಕಾಲ ನಿಲ್ಲಲಾರೆನೆಂದು ನನ್ನ ತಾಯಿ ಯೋಚಿಸಿದ್ದಳು. ಆದರೆ ಅವಳು ಕರೆಯುವಾಗ ನಾನು ಅವಳೊಡನೆ ಹೋಗದಿದ್ದುದರಿಂದ ಅವಳಿಗೆ ತುಂಬಾ ಸಿಟ್ಟು ಬಂತು.

ಕಂಬನಿ

ಅವರ ಮೇಲೆ ನಾನಲ್ಲಿರುವುದೇ ಕಷ್ಟವಾಯಿತು. ಕೊನೆಗೆ ನಾನೂ ಮನುವೂ ಊರು ಬಿಟ್ಟು ಇಲ್ಲಿಗೆ ಬಂದುಬಿಟ್ಟೆವು. ದಿನಗಳು ಕಳೆದಂತೆ ಮನುವಿನ ಬುದ್ಧಿ ಸಂಪೂರ್ಣವಾಗಿ ಲೋಪವಾಗಿಹೋಯ್ತು. ಏನೇನು ಮಾಡಿದರೂ ಅವನಿಗೆ ವಾಸಿಯಾಗಲಿಲ್ಲ. ಕೇವಲ 'ರಾಣಿ' ಎಂದು ನನ್ನನ್ನು ಕೂಗುವುದಲ್ಲದೆ ಹೆಚ್ಚಿನ ಮಾತುಗಳನ್ನೇ ಆಡುತ್ತಿರಲಿಲ್ಲ. ಆದರವನಿಗೆ ನಾನು ಹತ್ತಿರವಿರುವುದು ತಿಳಿಯುತ್ತಿತ್ತು. ನಾನೆಲ್ಲಾದರೂ ಸ್ವಲ್ಪ ಅತ್ತಿತ್ತ ಹೋದರೆ 'ರಾಣೀ' ಎನ್ನುತ್ತಿದ್ದ. ಮೂರು ವರ್ಷಗಳಿಂದ ನಾವಿಬ್ಬರೂ ಈ ಮನೆಯಲ್ಲಿದ್ದೆವು. ಈಗ ಅವನಿಲ್ಲ. ಮತ್ತೆ ನನಗಿಲ್ಲೇನು ಕೆಲಸ?

"ಡಾಕ್ಟರೇ, ನಾನು ನಿಮಗಿದೆಲ್ಲಾ ಬರೆಯುತ್ತಿರುವೆನೇಕೆ? ಇಷ್ಟು ವರ್ಷಗಳಲ್ಲಿ ನಮ್ಮಿಬ್ಬರ ವಿಷಯದಲ್ಲಿ ಮನುಷ್ಯೋಚಿತವಾದ ಕರುಣೆಯಿಂದ ವರ್ತಿಸಿದವರು ನೀವು ಮತ್ತು ಸುಬ್ಬು ಇಬ್ಬರೆ. ಅವರಿಂದ ನಿಮಗೆ ಹೇಳಿ ಹೋಗುವ ಸಲುವಾಗಿ ಇದನ್ನು ಬರೆಯಬೇಕಾಯ್ತು. ನೀವು ಮನುವಿನ ಕೊನೆಗಾಲದಲ್ಲಿ ಮಾಡಿದ ಸಹಾಯ ಎಂದೂ ಮರೆಯುವಂತಿಲ್ಲ. ನನ್ನಂಥ ದರಿದ್ರ ಪ್ರಾಣಿ ನಿಮಗೆ ಯಾವ ಪ್ರತಿಫಲವನ್ನು ಕೊಡಬಲ್ಲುದು? ದೇವರೇ ನಿಮಗೆ ಒಳ್ಳೆಯದನ್ನು ಮಾಡಬೇಕು.

ರಾಜಮ್ಮ"

ಓದಿ ಪಾರ್ವತಿಯ ಕೈಗೆ ಕೊಟ್ಟೆ. ಅವಳೂ ಓದಿದಳು. ಕಣ್ಣುಗಳೆರಡರಲ್ಲೂ ನೀರು ತುಂಬಿತ್ತು. 'ನಾನೆಂಥಾ ಪಾಪಿ' ಎಂದುಕೊಂಡಳು. ನನ್ನ ಮನಸ್ಸು ಏನೋ ಒಂದು ತರವಾಗಿತ್ತು. ಅದೂ ಪಾರ್ವತಿಯ ಮಾತನ್ನೇ ಹೇಳುವಂತೆ 'ನಾನೆಂಥಾ ಪಾಪಿ!' ಎಂದಿತು.

ಆದಿನ ಸಾಯಂಕಾಲ ತಿರುಗಾಡಲು ಹೊರಡುವಾಗ ಪಾರ್ವತಿಯು ತಾನೂ ಬರುತ್ತೇನೆಂದಳು. ಇಬ್ಬರೂ ರಾಜಮ್ಮನ ಮನೆಗೇ ಹೋದೆವು. ಆದರೆ ನಾವು ಹೋಗುವ ಮೊದಲೇ ಅವಳು ಹೊರಟು ಹೋಗಿದ್ದಳು—

ಎಲ್ಲಿಗೋ ಯಾರಿಗೆ ಗೊತ್ತು!

ಮಾರ್ಚ್ ೧೯೩೬